(24)

ತಿಂಗಳ ಪತ್ರಿಕೆ

ನವೆಂಬರ್ 2001

# ಅಚಲ

## ಒಳಗೇನಿದೆ ?







ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ, ಬೆಂಗಳೂರು

## ಅಚಲ

ಸಂಪುಟ - 16 ಸಂಚಿಕೆ - 11

ಸಂಪಾದಕ ಮಂಡಲಿ
ಎನ್. ಗಾಯತ್ರಿ
ನೇಮಿಚಂದ್ರ, ದೇವಿ,
ಬಿ. ಎನ್. ಸುಮಿತ್ರಾಬಾಯಿ
ಶಾಂತಾನಾಗರಾಜ್
ಹೆಚ್. ಎನ್: ಗೀತಾ
ಹೇಮಲತಾ ಮಹಿಷಿ

ಪ್ರಕಾಶಕರು
ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ,
ಬೆಂಗಳೂರು


ಚಂದಾ ಹಣವನ್ನು ಚೆಕ್‌ನಲ್ಲಿ ಕಳುಹಿಸುವವರು ರೂ. 10 ಬ್ಯಾಂಕ್ ಕಮೀಷನ್ ಸೇರಿಸಿ ಕಳುಹಿಸಬೇಕು. ಎಂ. ಓ. ಫಾರ್ಮಿನ ಕೊನೆಯ ಭಾಗದಲ್ಲಿ ತಮ್ಮ ಹೆಸರು ವಿಳಾಸಗಳನ್ನು ಸ್ಪಷ್ಟವಾಗಿ ನಮೂದಿಸಬೇಕು. ಬದಲಾದ ವಿಳಾಸವನ್ನು ದಯವಿಟ್ಟು ಬರೆದು ತಿಳಿಸಿ.


Achala - Edited by
Dr. N. Gayathri

Published by
Dr. G. Ramakrishna on behalf of Jagruthi Mahila Adhyayana Kendra

*Printed at*
Lipi Mudrana
Bangalore - 560 004


ಆತ್ಮೀಯರೇ,

ಕಳೆದ 15 ವರ್ಷಗಳಿಂದಲೂ ತಾವುಗಳು ಪ್ರೀತಿ, ಅಭಿಮಾನದಿಂದ ಅಚಲ ಪತ್ರಿಕೆಯನ್ನು ನಿಮ್ಮದಾಗಿಸಿಕೊಂಡು ಪೋಷಿಸುತ್ತಾ ಬಂದಿರುತ್ತೀರಿ. ಮಹಿಳಾ ಚಳುವಳಿಯ ಮತ್ತು ಸಂಶೋಧನೆಯ ಕ್ಷೇತ್ರದಲ್ಲಿ ಇನ್ನೂ ಬೆಟ್ಟದಷ್ಟು ಕೆಲಸವಾಗಬೇಕಿದೆ. ಈ ಮಹತ್ತರ ಕಾರ್ಯದಲ್ಲಿ ನಾವೆಲ್ಲರೂ ಒಟ್ಟಾಗಿ ಶ್ರಮಿಸಬೇಕಿದೆ. ನೀವೂ ಅಚಲ ಪತ್ರಿಕೆಯನ್ನು ನಿಮ್ಮ ವಿಚಾರಗಳ ವೇದಿಕೆಯನ್ನಾಗಿ ಮಾಡಿಕೊಳ್ಳಿ ಮತ್ತು ಪತ್ರಿಕೆಯ ಪ್ರಸಾರವನ್ನು ಹೆಚ್ಚಿಸುವಲ್ಲಿ ನೆರವಾಗಿ.

ಯಾವುದೇ ವಿವರಗಳನ್ನು ಬರೆಯದ ಚಂದಾಹಣವು ಹಲವಾರು ಎಂ.ಓ.ಗಳಲ್ಲಿ ನಮಗೆ ತಲುಪಿದೆ. ಚಂದಾದಾರರು ದಯವಿಟ್ಟು ಎಂ.ಓ. ಫಾರ್ಮಿನ ಹಿಂಭಾಗದಲ್ಲಿ ವಿಳಾಸವನ್ನು ಬರೆಯಿರಿ.

ಅಚಲದ ಚಂದಾ ವಿವರಗಳು ಹೀಗಿವೆ :

ವಾರ್ಷಿಕ ಚಂದಾ : ರೂ. 40/- (ವ್ಯಕ್ತಿಗಳಿಗೆ)
ರೂ. 75/- (ಸಂಸ್ಥೆಗಳಿಗೆ)
ಆಜೀವ ಚಂದಾ : ರೂ. 300/- (ವ್ಯಕ್ತಿಗಳಿಗೆ)
ರೂ. 400/- (ಸಂಸ್ಥೆಗಳಿಗೆ)

ಗಮನಿಸಿ
ಅಚಲ ವಿಳಾಸ ಬದಲಾಗಿದೆ
108, ಸ್ಕೈಲೈನ್ ಸುರಭಿ, 14-ಏ, ವಿದ್ಯಾಪೀಠ ರಸ್ತೆ,
ಬನಶಂಕರಿ 3ನೇ ಹಂತ, ಬೆಂಗಳೂರು - 560 085

ಸಂಪಾದಕೀಯ

# ಹೊಸ ಸರ್ಕಾರದಲ್ಲಿ ಮಹಿಳೆಯೆಲ್ಲಿ?

ಅಮೆರಿಕೆಯ ಬಲದಿಂದ ಉತ್ತರ ಮೈತ್ರಿಕೂಟ ಕಾಬೂಲನ್ನು ವಶಪಡಿಸಿಕೊಳ್ಳುತ್ತಿದ್ದಂತೆಯೇ ಆಫ್ಘನ್ನಿನ ಜನತೆ ನಿಟ್ಟುಸಿರು ಕಳಚಿ ಸ್ವಾತಂತ್ರ್ಯೋತ್ಸಾಹದ ಹುಮ್ಮಸ್ಸು ತುಂಬಿಕೊಂಡು ಮೇಲೇಳುತ್ತಿದೆ. ಧರ್ಮದ ಹೆಸರಿನಲ್ಲಿ ಅಮಾನುಷ ಹಿಂಸೆ ಕೊಡುತ್ತಿದ್ದ ತಾಲಿಬಾನರ ಆಡಳಿತ ಆಫ್ಘಾನ್ ಜನಸಮುದಾಯಕ್ಕೆ ಸಿಂಹಸ್ವಪ್ನವಾಗಿದ್ದರೆ, ಅದರ ಭಯಂಕರ ಕಾವು ತಟ್ಟಿದ್ದು ಮಹಿಳೆಯರಿಗೇ ಹೆಚ್ಚು. ಮನೆಬಿಟ್ಟು ಹೊರಗೆ ಹೋಗಲಾಗದ, ಶಿಕ್ಷಣ, ಉದ್ಯೋಗ ಎಲ್ಲದರಿಂದ ವಂಚಿತರಾದದ್ದೇ ಅಲ್ಲದೆ ಹೊರಜಗತ್ತಿಗೆ ಮುಖ ತೋರಿಸದಂತೆ ಬುರಖಾಧಾರಿಗಳಾಗಿ ಅರೆಶವವಾಗಿದ್ದ ಆಫ್ಘಾನ್ ಮಹಿಳೆಯರು ಈಗ ಸಂತೋಷದ ದಿನಗಳು ಕಾಣಬಹುದೆಂಬ ನಿರೀಕ್ಷೆಯಲ್ಲಿದ್ದಾರೆ.

1996ರಿಂದ ರೇಡಿಯೋ, ಚಲನಚಿತ್ರಗಳೆಲ್ಲಾ ನಿಷೇಧವಾಗಿದ್ದ ಆಫ್ಘಾನ್ ದೇಶದಲ್ಲಿ ಮೊದಲಿಗೆ ರೇಡಿಯೋದಲ್ಲಿ ಹೆಣ್ಣು ದನಿಯೊಂದು ಪ್ರಕಟಣೆ ಮಾಡಿದ್ದು ಸ್ವಾತಂತ್ರ್ಯದ ಒಂದು ಸಂಕೇತವೇನೋ ಸರಿ. ಬುರಕಾ ಕಳಚಿ ಶಾಲೆ, ಕಾಲೇಜಿಗೆ, ಆಫೀಸ್ ಕಛೇರಿಗೆ ಹೊರಡಲೆಂದು ತುದಿಗಾಲಲ್ಲಿ ನಿಂತಿರುವ ಮಹಿಳೆ ಇಂದು ಮೂಲಭೂತ ಪ್ರಶ್ನೆಯೊಂದನ್ನು ಕೇಳುತ್ತಿದ್ದಾಳೆ. ರಾಜಕೀಯವಾಗಿ ಅಧಿಕಾರದ ನೆಲೆಯಲ್ಲಿ ಉತ್ತರ ಮೈತ್ರಿಕೂಟ ಇಲ್ಲಿನ ಮಹಿಳೆಯರನ್ನು ಹೇಗೆ ಸ್ವೀಕರಿಸುತ್ತದೆ? ವಿಜಯೋತ್ಸವದ ಆರಂಭದಲ್ಲೇ ಇಲ್ಲಿನ ಮಹಿಳಾ ಸಂಘಟಕರಿಗೆ ಹುಟ್ಟಿರುವ ಅನುಮಾನಗಳಿವು. ಪೇಷಾವರ್‌ನಲ್ಲಿ ಆಫ್ಘಾನ್ ಮಹಿಳೆಯರ ನೆಟ್‌ವರ್ಕ್‌ನ ನಾಯಕಿ ಕೋರ್ಶಿದ್ ನೂರಿ 'ಗಂಡಸರ ಇಂತಹ ಬೇಜವಾಬ್ದಾರಿ ವರ್ತನೆಯಿಂದ ನಮಗೆ ಸಿಟ್ಟು ಬಂದಿದೆ'. ಗಂಡಸರ ಜೊತೆಯಲ್ಲಿ ಸಮಸಮವಾಗಿ ಹೋರಾಟ ಮಾಡಿರುವ ನಮಗೆ ನಮ್ಮನ್ನು ಸಂಪೂರ್ಣವಾಗಿ ನಿರ್ಲಕ್ಷಿಸಿದರೆ ಸಿಟ್ಟು ಬರುವುದಿಲ್ಲವೆ?, ಎನ್ನುತ್ತಾರೆ.

ಸುಮಾರು ಒಂದು ದಶಕಗಳಿಂದ ಇಲ್ಲಿ ನಡೆದಿರುವ ಸಂಕಷ್ಟ, ಯುದ್ಧಗಳಲ್ಲಿ ಆಫ್ಘಾನ್ ಜನತೆ, ಅದರಲ್ಲೂ ವಿಶೇಷವಾಗಿ ಪುರುಷರು ಸಾವನ್ನಪ್ಪಿದ್ದಾರೆ. ಆದ್ದರಿಂದ ಇಲ್ಲಿ ಮಹಿಳೆಯರ ಪ್ರಮಾಣದ ಸಂಖ್ಯೆ ಶೇಖಡ 65ರಷ್ಟಿದೆ. ಹೀಗಿರುವಾಗ ಮಹಿಳೆಯರ ರಾಜಕೀಯ ಪ್ರಾತಿನಿಧ್ಯವನ್ನು ಸಂಪೂರ್ಣ ಕಡೆಗಣಿಸಿದರೆ ಹೇಗೆ "ಆಫ್ಘಾನಿಸದ ನಾಯಕರಷ್ಟೇ ಅಲ್ಲ, ಅಮೆರಿಕಾ ಹಾಗೂ ವಿಶ್ವ ಸಂಸ್ಥೆಯ ನಾಯಕರೂ ಮಹಿಳಾ ಹಕ್ಕುಗಳ ಬಗ್ಗೆ ದೊಡ್ಡ ದನಿಯಲ್ಲಿ ಮಾತನಾಡುತ್ತಿದ್ದಾರೆ. ಆದರೆ ಅದನ್ನು ಕ್ರಿಯಾರೂಪಕ್ಕೆ ಇಳಿಸುವ ಯಾವ ಪ್ರಯತ್ನಗಳು ಅವರಿಂದ ನಡೆಯುವುದಿಲ್ಲ". ಎನ್ನುತ್ತಾರೆ ಜೈಬಾ ಶೋರಿಷ್, ವಾಷಿಂಗ್‌ಟನ್ನಿನಲ್ಲಿರುವ ಆಫ್ಘಾನ್ ಮಹಿಳೆಯರ ಹಕ್ಕುಗಳಿಗಾಗಿ ಹೋರಾಡುತ್ತಿರುವ ಸಾಮಾಜಿಕ ಕಾರ್ಯಕರ್ತೆ.

ತಾಲಿಬಾನ್‌ನಂತರದ ಸರ್ಕಾರದ ನಿರ್ಮಾಣಕ್ಕೆ ಬಿರುಸಿನಿಂದ ಚಟುವಟಿಕೆಗಳು ನಡೆಯುತ್ತಿವೆ. ಕೆಲವು ವಾರಗಳ ಹಿಂದೆಯಷ್ಟೇ ಈ ವಿಷಯ ಕುರಿತು ಚರ್ಚಿಸಲು ಪೇಷಾವರ್‌ನಲ್ಲಿ ಶಾಂತಿ ಮತ್ತು ಐಕ್ಯತೆಯ ಸೂತ್ರಗಳನ್ನು ರೂಪಿಸುವ ಉದ್ದೇಶದಿಂದ ಸಮಾವೇಶವನ್ನು ಗೈಲಾನಿ ಕುಟುಂಬವು ನಡೆಸಿತ್ತು. ಆಫ್ಘಾನಿಸ್ಥಾನದ ವಿವಿಧ ಪ್ರಾಂತ್ಯ, ಬಣಗಳನ್ನು ಪ್ರತಿನಿಧಿಸಿ 1200 ಪ್ರತಿನಿಧಿಗಳು ಈ ಸಮಾವೇಶದಲ್ಲಿ ಭಾಗವಹಿಸಿದ್ದರು. ಇದರಲ್ಲಿ ಒಬ್ಬ ಮಹಿಳೆಯೂ ಇಲ್ಲ; ಒಬ್ಬ ಮಹಿಳೆಗೂ ಆಹ್ವಾನವನ್ನು ನೀಡಿರಲಿಲ್ಲ. ಆಫ್ಘಾನಿಸ್ಥಾನದಲ್ಲಿ ಜಾಹೀರ್‌ಷಾನ ಆಡಳಿತದಲ್ಲಿ 1963ರ ಸಂವಿಧಾನ ರಚನೆಯ ಸಮಿತಿಯ ಸಂದರ್ಭದಲ್ಲಿ ಮಹಿಳೆಯರ ಅಭಿಪ್ರಾಯವನ್ನು ಕೇಳಿದ್ದನ್ನು ಬಿಟ್ಟರೆ ಎಂದೂ ಇಲ್ಲಿನ ಮಹಿಳೆಯರ ಅಭಿಪ್ರಾಯವನ್ನು ಗಂಭೀರವಾಗಿ ಪರಿಗಣಿಸಿದ್ದಿಲ್ಲ.

ಅಧಿಕಾರದ ಕೇಂದ್ರವಾದ ರಾಜಕಾರಣದಲ್ಲಿ ಮಹಿಳೆಯನ್ನು ನಗಣ್ಯವಾಗಿ ಕಾಣುವುದು ಇದೆ ಮೊದಲಲ್ಲ. ಆಫ್ಘಾನಿಸ್ಥಾನದ ಮಹಿಳೆಯರು ತಮ್ಮನ್ನು ಎಷ್ಟು ಶಕ್ತಿಯುತವಾಗಿ ಸಮರ್ಥಿಸಿಕೊಳ್ಳಬಲ್ಲರು, ಎಂಬುದೇ ಈ ಪ್ರಶ್ನೆಗೆ ಉತ್ತರವಾಗಬಲ್ಲದು. ಆಫ್ಘಾನಿಸ್ಥಾನದ ಈ ಅನುಭವ ಭಾರತದಲ್ಲೂ ಹತ್ತು ಹಲವು ಸಾಮಾಜಿಕ ಚಳುವಳಿಗಳಲ್ಲಿ ಭಾಗವಹಿಸಿದ ಮಹಿಳೆಯರ ಅನುಭವವಾಗಿದೆ. ಪ್ರಜ್ಞಾಪೂರ್ವಕ ಹೋರಾಟವೊಂದೇ ಇದಕ್ಕೆ ಪರಿಹಾರ.

- ಎನ್. ಗಾಯತ್ರಿ

★ ★ ★

# ನೆನಪುಗಳ ಕವುದಿ ಲೇಖ - ಲೋಕ

- ಎಸ್. ಸತ್ಯಾ

ಕನ್ನಡದಲ್ಲಿ ಲೇಖಕಿಯರು ಆತ್ಮಚರಿತ್ರೆ ಬರೆದಿರುವುದು ತೀರಾ ವಿರಳ. ಇಲ್ಲವೇ ಇಲ್ಲ ಎನ್ನಬಹುದು. ಬದುಕನ್ನೆಲ್ಲ ಬರಹವಾಗಿಸಿ, ಆ ನಂತರದ ಬದುಕನ್ನು ದಕ್ಕಿಸಿಕೊಳ್ಳಲು ಸಾಧ್ಯವೇ? ಎಂಬ ಪ್ರಶ್ನೆ ಮಹಿಳೆಯರ ಲೇಖನಿಗೆ ಕಡಿವಾಣ ಹಾಕಿದೆ. ಬರೆದಂತೆ ಬದುಕುವುದು ಸಾಧ್ಯವಾಗಬಹುದು. ಆದರೆ ಬದುಕಿದ್ದನ್ನೆಲ್ಲಾ ಬರೆಯಲು ಸಾಧ್ಯವಿಲ್ಲದಿರುವುದು ವಾಸ್ತವ.

'ಸ್ವಯಂ ನಿಯಂತ್ರಣ' -self censorship ಲೇಖಕಿಯರನ್ನು ಬಂಧಿಸಿರುವ ಸರಪಳಿ. ಕನ್ನಡದಲ್ಲಿ ಇಂದು ಲೇಖಕಿಯರು ದೊಡ್ಡ ಸಂಖ್ಯೆಯಲ್ಲಿದ್ದಾರೆ. ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ಅಪರಿಚಿತವಾಗಿದ್ದ ಬದುಕು ಹಲವು ಮಗ್ಗುಲುಗಳನ್ನು ಮಹಿಳೆಯರು ಪರಿಚಯಿಸಿದ್ದಾರೆ. ಆದರೆ ಈ ಎಲ್ಲರೂ ತಮಗೆ ಹೇಳಬೇಕೆನಿಸಿದ್ದನ್ನೆಲ್ಲಾ ಹೇಳಲು ಸಾಧ್ಯವಾಗಿದೆಯಾ ಎಂಬ ಪ್ರಶ್ನೆ ಇಂದು ಎಲ್ಲ ಕಡೆಗಳಿಂದ ಕೇಳಿಬರುತ್ತಿದೆ.

'ಸಾಹಿತ್ಯ' ಬದುಕಿಗೆ ಹಿಡಿದ ಕನ್ನಡಿ ಎಂಬ ಮಾತಿದೆ. ಕನ್ನಡಿ ಯಾವುದನ್ನೂ censor ಮಾಡುವುದಿಲ್ಲ. ಎದುರಿಗಿರುವುದನ್ನೆಲ್ಲಾ ಪ್ರತಿಬಿಂಬಿಸುತ್ತದೆ. ಹಾಗಾದರೆ ಇಂದು ಮಹಿಳೆಯರು ನಮ್ಮ ಮುಂದೆ ಬರೆದಿಟ್ಟಿರುವುದು ಮಾತ್ರವೇ ಅವರ ಬದುಕಿನ ಅನುಭವಗಳಾ? ಎನ್ನುವುದು ಒಂದು ಪ್ರಶ್ನೆ. ಮತ್ತೊಂದು ಪ್ರಶ್ನೆ ಹೀಗೆ ಲೇಖಕಿ ತನ್ನ ಖಾಸಗಿತನವನ್ನೆಲ್ಲ ಬಯಲುಗೊಳಿಸಿದರೆ ಮಾತ್ರವೇ ಪ್ರಾಮಾಣಿಕತೆಯಾ? ಇಂತಹ ಗೊಂದಲುಗಳು ಇಂದು ಲೇಖಕಿಯರನ್ನು ಮತ್ತು ಓದುಗರನ್ನು ಕಾಡುತ್ತಿವೆ.

ಇದಕ್ಕೆ ಮುಖ್ಯವಾಗಿ ಎರಡರು ಕಾರಣಗಳಿವೆ. ಒಂದು ಲೇಖಕಿಯರು ಭಾರೀ ಪ್ರಮಾಣದಲ್ಲಿ ಸ್ವಯಂ ನಿಯಂತ್ರಣಕ್ಕೆ ಗುರಿಯಾಗಿದ್ದಾರೆ ಎಂಬ ಅರಿವು ಮತ್ತು ಈ ಬಗೆಗಿನ ತಳಮಳ. ಹಾಗೂ ಮತ್ತೊಂದು, ಲೇಖಕಿಯರ ಎಲ್ಲ ಬರಹಗಳಲ್ಲೂ ಅವರ ಖಾಸಗಿ ಬದುಕಿನ ಎಳೆಗಳನ್ನು ಹುಡುಕುವ ಓದುಗರ ಕೆಟ್ಟ ಅಭ್ಯಾಸ. ಅಕಸ್ಮಾತ್ ಈ ಬರಹಗಳಲ್ಲಿ ಖಾಸಗಿ ಬದುಕಿನ ನೆರಳು ಸ್ಪಷ್ಟವಾಗದಿದ್ದಲ್ಲಿ ಲೇಖಕಿಯ . ಪ್ರಾಮಾಣಿಕತೆಯನ್ನೇ ಅನುಮಾನಿಸುವ ಪ್ರವೃತ್ತಿ.

ಲೇಖಕಿಯರು ಒಪ್ಪಲಿ, ಬಿಡಲಿ self censorship ಎನ್ನುವುದು ಭಾರೀ ಪ್ರಮಾಣದಲ್ಲಿ ಜಾರಿಯಲ್ಲಿದೆ. ಇದು social conditioningನ ಒಂದು ಭಾಗವಾಗಿ ಮಹಿಳೆಯರಲ್ಲಿ ಆಳವಾಗಿ ಬೇರೂರಿದೆ. ಎರಡನೆಯದಾಗಿ ಪುರುಷರ ಬರಹಗಳಲ್ಲಿ ಅವರ ಖಾಸಗಿ ಬದುಕಿನ ಸಂಬಂಧಗಳನ್ನು ಹುಡುಕುವ ಕೆಲಸ ಮಾಡದಿದ್ದರೂ ಮಹಿಳೆಯರ ಬರಹದಲ್ಲಿ ಅದನ್ನು ಅಪೇಕ್ಷಿಸುವುದು ಓದುಗರಿಗೆ ರೂಢಿಯಾಗಿಬಿಟ್ಟಿದೆ. ಇಂತಹ ಹುಡುಕಾಟ ಕೂಡ social conditioningನ ಫಲವೇ. ಇಂತಹ ರೂಢಿಯ ಅರಿವಿರುವುದರಿಂದ ಲೇಖಕಿಯರು ತಮ್ಮ ಒಳಗು ಹಾಗೂ ಹೊರಗಿನ ಪ್ರತ್ಯೇಕತೆಯನ್ನು ತುಂಬಾ ಜತನದಿಂದ ಕಾಯ್ದುಕೊಂಡು ಬರುತ್ತಿದ್ದಾರೆ. ಇದು ಕೇವಲ ಕನ್ನಡದ ಲೇಖಕಿಯರಿಗೆ ಸೀಮಿತವಾದದ್ದಲ್ಲ. ಎಲ್ಲ ಲೇಖಕಿಯರಿಗೂ ಅನ್ವಯಿಸುವುದು. ಆದರೆ ಒಂದು ಮಾತು ಸತ್ಯ. ಲೇಖಕಿಯರು ಬರಹಕ್ಕಿಳಿಸಿದ್ದರ ಹಿಂದೆ ಅವರು ನುಂಗಿಕೊಂಡ ಬದುಕಿನ ಅನುಭವಗಳ ಭದ್ರ ಬುನಾದಿ ಇರುತ್ತದೆ.

ಈ ಬುನಾದಿಗಳನ್ನು ಅನಾವರಣಗೊಳಿಸುವ ಪುಸ್ತಕ ಮಾಲೆ 'ಲೇಖ-ಲೋಕ'. ಕನ್ನಡದ ಲೇಖಕಿಯರ, 'ಬರೆಯದ ಬದುಕಿನ' ಪಲಕುಗಳನ್ನು ಹೆಕ್ಕಿಕೊಡುವ ಅವರ ಸಾಹಿತ್ಯ ಕೃತಿಗಳ ಹಿಂದಿರುವ ಕಾಳಜಿಗಳನ್ನು ಬಿಂಬಿಸುವ ಪ್ರಯತ್ನ 'ಲೇಖ-ಲೋಕ'.

ಲೇಖಕಿಯರ ಬರಹಕ್ಕೂ - ಬದುಕಿಗೂ ಇರುವ ನಂಟನ್ನು ಬಣ್ಣಿಸುವ ಈ ಲೇಖ-ಲೋಕ ಕೃತಿಗಳು ಮೂಡಿ ಬಂದದ್ದು 'ಮಹಿಳಾ ಸಾಹಿತ್ಯ ಚರಿತ್ರೆಯ ನಿರ್ಮಾಣದ ಒಂದು ಭಾಗವಾಗಿ'. ಮಹಿಳಾ ಸಾಹಿತ್ಯ ಚರಿತ್ರೆ ರಚನೆಯಾಗಬೇಕು, ಮಹಿಳೆಯರ ಸಾಹಿತ್ಯ ಕಾಣಿಕೆ ಸೂಕ್ತವಾಗಿ ದಾಖಲಾಗಬೇಕು ಎಂಬ ಕರ್ನಾಟಕ ಲೇಖಕಿಯರ ಸಂಘದ ಹಿರಿಯಾಸೆಗೆ ಉತ್ತರವಾಗಿ ಮೂರು ಭಾಗಗಳಲ್ಲಿ ಹೊರಬಂದಿದೆ ಲೇಖ-ಲೋಕ. ಈ ಪುಸ್ತಕ ಮಾಲೆಯ ವೈಶಿಷ್ಟ್ಯ ಇರುವುದು ಲೇಖಕಿಯರ ಬದುಕು ಮತ್ತು ಬರಹಗಳನ್ನು ಲೇಖಕಿಯರದೇ ಆದ ಮಾತುಗಳಲ್ಲಿ ಹಿಡಿದಿಡುವುದರಲ್ಲಿ ಹಾಗೂ ಇಂತಹದೊಂದು ಚರಿತ್ರೆಯ ನಿರ್ಮಾಣವನ್ನು ಸಂಘಟನಾತ್ಮಕವಾಗಿ ಮತ್ತು ಸಾಮೂಹಿಕವಾಗಿ ಮಾಡಿರುವುದರಲ್ಲಿ.

1996ರ ಜನವರಿಯಲ್ಲಿ 'ಮಹಿಳೆ, ಸಾಹಿತ್ಯ, ಪರಿಸರ' ಎಂಬ ವಿಷಯ ಕುರಿತು ಲೇಖಕಿಯರೊಂದಿಗೆ ಸಂವಾದ ನಡೆಸುವ ಪುಟ್ಟದೊಂದು ಐಡಿಯಾ ಮೊಳಕೆಯೊಡೆಯಿತು. ಮೊಳಕೆ ಬಲಿತು ಗಿಡವಾದಾಗ ಹಲವು ಹಿರಿಯ ಲೇಖಕರು ಹಿರಿಯ ಲೇಖಕಿಯರೊಂದಿಗೆ ತಮ್ಮ ಬದುಕಿನ ಪುಟಗಳನ್ನು ತೆರೆದಿಡುತ್ತಾ ಹೋದರು. ಒಬ್ಬರಾದ ಮೇಲೊಬ್ಬರು. ಒಬ್ಬರ ಮಾತು ಕೇಳಿ ಮತ್ತೊಬ್ಬರು. ನೆನಪಿನ ಕವುದಿಗೆ ಒಂದೊಂದೇ ಬಟ್ಟೆ ಚೂರು ಸೇರಿಸಿದರು. ಅಲ್ಲಿ ಎಲ್ಲ ಬಣ್ಣಗಳಿದ್ದವು. ಹಲವರು ಸೇರಿ ಹೊಲಿದ ಕವುದಿ ಮೂಡಿತ್ತು. ಲೇಖಕಿಯರ ಅಂತರಂಗವನ್ನು ತೆರೆದಿಟ್ಟ ಈ ಸಂವಾದ ಪುಸ್ತಕವಾಗಿ ಬಂದಾಗ ಹಲವು ಲೇಖಕಿಯರ ಪುಟ್ಟಪುಟ್ಟ ಆತ್ಮ ಕಥೆಗಳು ಇಲ್ಲಿ ದಾಖಲಾಗಿದ್ದವು. ಇದೇ ಪ್ರಯೋಗವನ್ನು ಮತ್ತೆರಡು ಬಾರಿ ಪುನರಾವರ್ತಿಸಿ ಸುಮಾರು 30 ಹಿರಿ-ಕಿರಿಯ

ಲೇಖಕಿಯರ ಆತ್ಮ ಕಥೆಗಳನ್ನು ದಾಖಲಿಸಲಾಗಿದೆ. ಜೊತೆಗೆ ಒಂದೇ ಕೃತಿಯಲ್ಲಿ ಹಲವು ಲೇಖಕಿಯರ ಮುಖಾಮುಖಿಯಾಗಿದೆ.

ಪ್ರಾದೇಶಿಕವಾಗಿ ವಿಭಿನ್ನ ಪ್ರದೇಶಗಳನ್ನು ಕಾಲ ಘಟ್ಟದಲ್ಲಿ ವಿವಿಧ ಸಾಹಿತ್ಯ ಪ್ರಕಾರಗಳನ್ನು ಹಾಗೂ ಸೈದ್ಧಾಂತಿಕವಾಗಿ ವಿಭಿನ್ನ ನೆಲೆಗಳನ್ನು ಬಿಂಬಿಸುವ ಈ ಲೇಖಕಿಯರು ಇಲ್ಲಿ ತೆರೆದಿಟ್ಟಿರುವ ಬದುಕು ನಿಜಕ್ಕೂ ಆಚ್ಚರಿಯನ್ನುಂಟು ಮಾಡುವಂತಹುದು. ಲೇಖಕಿಯರು ತಮ್ಮ ನೆನಪಿನ ಆಳಕ್ಕಿಳಿದು, ಸಾಧ್ಯವಾದಷ್ಟೂ ಹಿಂದಕ್ಕೆ ನಡೆದು ತಾವು ಲೇಖಕಿಯಾಗಿ ರೂಪುಗೊಳ್ಳಲು ಕಾರಣವಾದ ಘಟನೆಗಳನ್ನು, ಪರಿಸರವನ್ನು ಹೆಕ್ಕಿ ತೆಗೆದಿದ್ದಾರೆ. ಇದು ಕೇವಲ ಓದುಗರನ್ನು ಲೇಖಕಿಯರೊಂದಿಗೆ ಮುಖಾಮುಖಿಯಾಗಿಸದೆ, ಲೇಖಕಿಯರಿಗೆ ತಮ್ಮ 'ಒಳಗಿನ' ಜೊತೆಗೂ ಮುಖಾ ಮುಖಿ ಮಾಡಿಸಿದೆ.

ಈ ಮೂರು ಸಂಪುಟಗಳಲ್ಲಿ ಎರಡು ತಲೆಮಾರಿನ ಲೇಖಕಿಯರ ಬದುಕು ಅನಾವರಣಗೊಂಡಿರುವ ಬಗೆ ನೋಡಿದರೆ ಅವರವರ ಬಾಲ್ಯ, ಯೌವನ, ಬರಹದ ಪ್ರೇರಣೆಗಳಲ್ಲಿ ಪರಿಸರದ ವ್ಯತ್ಯಾಸಗಳಿರುವುದು ಕಾಣುತ್ತದೆಯೇ ಹೊರತು ಸಮಾಜದ ಮೂಲಚಿಂತನೆಯಲ್ಲಿ ಹಾಗೂ ಲೇಖಕಿಯರ ಮೂಲ ಚಿಂತನೆಗಳಲ್ಲಿ ಹೆಚ್ಚೇನೂ ವ್ಯತ್ಯಾಸ ಕಾಣುವುದಿಲ್ಲ. ತಮ್ಮ ಬದುಕಿನ ಯಾವುದೇ ಸ್ಥಿತಿಗೆ ಯಾವುದೇ ವ್ಯಕ್ತಿಯನ್ನಾಗಲಿ, ಪರಿಸ್ಥಿತಿಯನ್ನಾಗಲಿ ದೂಷಿಸದೆ ಪಕ್ವತೆಯಿಂದ ವಿಶ್ಲೇಷಿಸಿರುವುದು ಈ ಕೃತಿಯ ಪ್ರಮುಖ ಅಂಶ. ಶೈಲಜಾ ಉಡುಚಣ ಒಂದೆಡೆ ಹೇಳುತ್ತಾರೆ -'ಇಲ್ಲಿ ಮಾತನಾಡಿದ ಯಾರೂ ತನ್ನ ತಂದೆಯ ಬಗ್ಗೆ ಬೇಸರದ ಮಾತನ್ನು ಹೇಳಲಿಲ್ಲ. ಹೆಚ್ಚಿನ ಎಲ್ಲ ತಂದೆಯರೂ ಲೇಖಕಿಯರು ರೂಪುಗೊಳ್ಳುವ ಒತ್ತಾಸೆಯಾಗಿದ್ದಾರೆ' - ಎಂದು. ಪುರುಷ ಪ್ರಧಾನ ಮೌಲ್ಯಗಳು ಮಹಿಳೆಯರ ವೈರಿಗಳೇ ಹೊರತು ಎಲ್ಲ ಪುರುಷರಲ್ಲ ಎಂಬ ಮಾತನ್ನು ಇದು ದೃಢಪಡಿಸುತ್ತದೆ. ನಮ್ಮ ಸಾಮಾಜಿಕ ಹಾಗೂ ಕೌಟುಂಬಿಕ ಪರಿಸ್ಥಿತಿಯಲ್ಲಿ 'ಗಂಡು' ಎಂಬುದು - ಅದು ತಂದೆಯಿರಲಿ, ಅಣ್ಣ - ತಮ್ಮನಿರಲಿ - ಮನೆಯ ಹೆಣ್ಣುಮಕ್ಕಳಿಗೆ ಹೊರ ಸಮಾಜಕ್ಕೆ ತೆರೆದ ಕಿಟಕಿಗಳು. ಹಲವು ದಶಕಗಳ ಹಿಂದಿನ ತಂದೆಯರು ಈ ಕಿಟಕಿಗಳಾಗಿ ಓದು - ಬರಹ - ಅರಿವಿನ ಗಾಳಿ ಬೆಳಕನ್ನು ತೆರೆದಿಟ್ಟಿದ್ದಾರೆ. ಗಂಭೀರ ಕಥೆಗಳಂತೆ ಸಾಗುವ ಈ ಆತ್ಮ ಕಥಾನಕಗಳು ಲೇಖಕಿಯರ ವಿಭಿನ್ನ ಬರಹ ಶೈಲಿಗಳನ್ನು ಒಂದೇ ಕಡೆ ದಾಖಲಿಸುತ್ತದೆ.

ಮೊದಲ ಭಾಗಕ್ಕೆ ಅತ್ಯಂತ ಮೌಲಿಕವಾದ ಮುನ್ನುಡಿ ಬರೆದಿರುವ ಡಾ. ವಿಜಯಾ ದಬ್ಬೆ ಅವರು ಹೇಳುವಂತೆ ಇಲ್ಲಿ ಹಲವು ಲೇಖಕಿಯರು ಸಂಪೂರ್ಣವಾಗಿ ತೆರೆದುಕೊಂಡಿಲ್ಲ ಎನಿಸಬಹುದು ಅಥವಾ ಕೆಲವರ ಬದುಕು ಬಹಳ ಸಂಕೀರ್ಣ ಮತ್ತೆ ಕೆಲವರು ಬಹಳ ಸರಳ ಎಂದೂ ಕಾಣಬಹುದು. ಆದರೆ ಈ ಪ್ರಯೋಗದ ಉದ್ದೇಶ ಇರುವುದು ಪೂರ್ಣ ತೆರೆದುಕೊಳ್ಳುವುದರಲ್ಲಿ ಅಥವಾ ಸಂಕೀರ್ಣ ಬದುಕು ಮಾತ್ರವೇ ದಟ್ಟ ಅನುಭವ ಕೊಡುವುದು ಎಂದು ವಾಖ್ಯೆ ನೀಡುವುದಾಗಲಿ ಅಲ್ಲ. ತಮಗೆ ಎದುರಾದ ಪರಿಸರವನ್ನು ಲೇಖಕಿಯರು ಹೇಗೆ ದಕ್ಕಿಸಿಕೊಂಡರು ಎಂಬುದೇ ಇಲ್ಲಿ ಮುಖ್ಯವಾಗುತ್ತದೆ.

ಸಾಹಿತ್ಯ ಕ್ಷೇತ್ರದಲಿ, ವಿಮರ್ಶೆಯ ಕ್ಷೇತ್ರದಲ್ಲಿ 'ಸ್ತ್ರೀವಾದ' ಕುರಿತು ಸಾಕಷ್ಟು ಚರ್ಚೆ, ಅಧ್ಯಯನ ನಡೆಯುತ್ತಿದ್ದರೂ ಸಾಮಾಜಿಕವಾಗಿ, ಕೌಟುಂಬಿಕ ನೆಲೆಗಳಲ್ಲಿ 'ಸ್ತ್ರೀವಾದ' ಇನ್ನೂ ಗಟ್ಟಿಗೊಳ್ಳಬೇಕಾಗಿದೆ. ಆ ನೆಲೆಯಲ್ಲಿ ಲೇಖ ಲೋಕ ಒಂದು ವಿಭಿನ್ನ ಪ್ರಯತ್ನ ಎನ್ನಬಹುದು.

## ನಾನು ಹಿಂತಿರುಗುವುದಿಲ್ಲ

ನಾನೀಗ ಎಚ್ಚೆತ್ತ ಮಹಿಳೆ
ಹೊಸ ಹುಟ್ಟು ಪಡೆದು, ದಹಿಸಿ ಹೋದ ಮಕ್ಕಳ
ಬೂದಿಯಿಂದೆದ್ದ ಬಿರುಗಾಳಿ!
ನನ್ನ ಸಹೋದರರು ಹರಿಯಿಸಿದ ರಕ್ತದ ಹೊಳೆಯಲ್ಲಿ
ಹುಟ್ಟಿದವಳು.
ನನ್ನ ನೆಲದ ಕ್ರೋಧವೇ ನನ್ನೊಳಗಿನ ಶಕ್ತಿ
ಸುಟ್ಟು ನಾಶವಾದ ನನ್ನ ಹಳ್ಳಿಗಳು ನನ್ನೊಳಗೆ ದ್ವೇಷದ
ಕಿಡಿಬಿತ್ತಿದೆ
ಓ ತಾಯ್ನಾಡಿಗರೇ! ನಿಡಿದಾದ ನಿಮ್ಮ ಎಚ್ಚರಿಕೆಗಳು
ನನ್ನನ್ನು
ಅಶಕ್ತ ಮತ್ತು ಅಸಮರ್ಥಳನ್ನಾಗಿಸುವುದಿಲ್ಲ
ತಿಳಿಯಿರಿ.
ನನ್ನ ಧ್ವನಿಗೆ ಸಹಸ್ರ ಸಹಸ್ರ ಎಚ್ಚೆತ್ತ ಮಹಿಳೆಯರ
ಧ್ವನಿಸೇರುತ್ತಿದೆ
ನನ್ನ ಮುಷ್ಟಿಯಲ್ಲಿ ಅಸಂಖ್ಯ ದೇಶಬಾಂಧವರ
ಮುಷ್ಟಿಗಳು ಬೆಸುಗೆಯಾಗಿದೆ
ನಾವು ಈ ದಾಸ್ಯದ ಶೃಂಖಲೆಯನ್ನೂ ಈ
ವೇದನೆಯನ್ನೂ ಕೊನೆಗೊಳಿಸುತ್ತೇವೆ.
ಅದಕ್ಕೆ ನಾನೀಗ ಎಚ್ಚೆತ್ತ ಮಹಿಳೆಯಾಗಿದ್ದೇನೆ
ನನ್ನ ಹೊಸ ಮಾರ್ಗವನ್ನು ಕಂಡು ಕೊಂಡಿದ್ದೇನೆ
ಮತ್ತು ಎಂದೆಂದಿಗೂ ಮುಂದಿಟ್ಟ ಅಡಿಯನ್ನು
ಹಿಂತಿರುಗಿಸುವುದಿಲ್ಲ!

ಮೂಲ - ಮೀನಾ (RAWA ಸಂಸ್ಥಾಪಕಿ)
ಕನ್ನಡಕ್ಕೆ - ಶಾಂತಾನಾಗರಾಜ್

# ಪ್ರವಾಹದ ವಿರುದ್ಧ ಹೋರಾಡಿದ ಮೀನಾ

ರೆವೆಲ್ಯೂಶನರಿ ಅಸೋಸಿಯೇಶನ್ ಆಫ್ ದಿ ವಿಮೆನ್ ಆಫ್ ಅಫ್ಘಾನಿಸ್ತಾನ್ (RAWA) ಇದು ಅಫ್ಘಾನಿಸ್ತಾನದ ಒಂದು ಸಂಸ್ಥೆ. ದೀರ್ಘಕಾಲದ ಯುದ್ಧದ ಪರಿಣಾಮವೇನು ಎನ್ನುವುದಕ್ಕೆ ಉತ್ತಮ ಉದಾಹರಣೆ ಅಫ್ಘಾನಿಸ್ತಾನ. ಬಾಂಬುಗಳ ಸಿಡಿತದಿಂದ ಉಂಟಾಗಿರುವ ಭೀಕರ ಬರಗಾಲ, ಬಡತನ, ರೋಗ, ಸಾವು, ಎಲ್ಲಕ್ಕೂ ಗುರಿಯಾಗುತ್ತಿರುವವರು ಮಹಿಳೆಯರು ಮತ್ತು ಮಕ್ಕಳು. ಇವೆಲ್ಲ ಗಾಯಗಳ ಮೇಲೆ ಉಪ್ಪು ಸವರಿದಂತೆ ಮೂಲಭೂತವಾದಿಗಳು ಮಹಿಳೆಯರಿಗೆ ಹೊಸ ಹೊಸ ಕಾನೂನನ್ನು ಸೃಷ್ಟಿಸುತ್ತಾ ಅವರ ಬದುಕನ್ನು ಮತ್ತಷ್ಟು ನರಕವನ್ನಾಗಿಸುತ್ತಾರೆ. ಇಂಥ ಪರಿಸ್ಥಿತಿಯಲ್ಲೇ ಅನಿವಾರ್ಯದ ಅಗತ್ಯವಾಗಿ ಹುಟ್ಟಿದ್ದುRAWA ಸಂಸ್ಥೆ ಇದೊಂದು ಸ್ವತಂತ್ರವಾದ ರಾಜಕೀಯ ಹಾಗೂ ಸಾಮಾಜಿಕ ಅಗತ್ಯಗಳಿಗಾಗಿರುವ ಸಂಸ್ಥೆ. ಇದರ ಉದ್ದೇಶ ನೇರ ಹಾಗೂ ಸರಳ. ಶಾಂತಿ ಸ್ಥಾಪನೆ, ಸ್ವಾತಂತ್ರ್ಯಗಳಿಕೆ, ಪ್ರಜಾಪ್ರಭುತ್ವ ಸ್ಥಾಪನೆ ಮತ್ತು ಮಹಿಳೆಯರ ಹಕ್ಕಿಗಾಗಿ ಹೋರಾಟ. ಇದರ ಸಂಸ್ಥಾಪಕಿ ಮೀನಾ ಎನ್ನುವ ಮಹಿಳೆ.

ಮೀನಾ ಹುಟ್ಟಿದ್ದು ಕಾಬೂಲ್‌ನಲ್ಲಿ 1957ರಲ್ಲಿ. ಆಕೆ ಕಾಲೇಜು ಓದುತ್ತಿರುವಾಗ ರಷ್ಯ ನಡೆಸಿದ ಸತತ ಯುದ್ಧದ ಪರಿಣಾಮ ದೇಶದ ತುಂಬ ಹರಡಿತ್ತು. ಮಹಿಳೆಯರ ಸ್ಥಿತಿ ನರಕವಾಗಿ ಹೋರಾಟ ಅನಿವಾರ್ಯವೆನಿಸಿದ ಕಾರಣಕ್ಕೆ ಮೀನಾ ಕಾಲೇಜು ತೊರೆದು ತನ್ನಂತೆ ಚಿಂತಿಸಬಲ್ಲ ಮಹಿಳೆಯರನ್ನೂ ಸಂಘಟಿಸಿ ಹೋರಾಟ ಪ್ರಾರಂಭಿಸಿದರು. ಆಗ ಮೀನಾರ ಮುಂದಿದ್ದ ಸಮಸ್ಯೆ ಅಫ್ಘನ್ ಮಹಿಳೆಯರನ್ನು ಮೊದಲು ಅಕ್ಷರಸ್ಥರನ್ನಾಗಿಸುವುದು. ಇದಕ್ಕಾಗಿRAWA ಸೇವಾ ಸಂಸ್ಥೆ 1977ರಲ್ಲಿ ಪ್ರಾರಂಭವಾಯಿತು. ಅಲ್ಲಿಯವರೆಗೆ ಬರಿ ಮೌನವನ್ನೇ ಬದುಕಾಗಿಸಿಕೊಂಡ ಅಫ್ಘನ್ ಮಹಿಳೆಯರಿಗೆ RAWA ಧ್ವನಿಯಾಯಿತು. ರಷ್ಯ ನಡೆಸುತ್ತಿದ್ದ ದಾಳಿ ಮತ್ತು ಮೂಲಭೂತವಾದಿಗಳ ದಬ್ಬಾಳಿಕೆಯಿಂದ ಅಲ್ಲಿಯ ಮಹಿಳೆಯರಿಗಾಗುತ್ತಿದ್ದ ಅನ್ಯಾಯವನ್ನು RAWA ದ ಸದಸ್ಯರು ಶಾಲೆ, ಕಾಲೇಜು ಮತ್ತು ಮಹಿಳೆಯರು ಸೇರುತ್ತಿದ್ದ ಸ್ಥಳಗಳಲ್ಲಿ ಪ್ರಚಾರ ಪ್ರಾರಂಭಿಸಿದರು. ಇದು ನಿಧಾನವಾಗಿ ಮಹಿಳೆಯರ ಕಣ್ಣು ತೆರೆಯಲಾರಂಭಿಸಿತು. 'ತಾವು ಶೋಷಣೆಗೆ ಹುಟ್ಟಿದವರು, ಹೆಣ್ಣಾದುದರಿಂದ ಗಂಡಸರು ಹೇಳಿದಂತೇ ಬದುಕಬೇಕು' ಎಂಬು ಭಾವಿಸಿದ್ದ ಸಂಪ್ರದಾಯಸ್ಥ ಮಹಿಳೆಯರೂ RAWA ದ ಪ್ರಚಾರದಿಂದ ವಿಭಿನ್ನವಾಗಿ ಯೋಚಿಸಲಾರಂಭಿಸಿದರು.

'RAWA' ನಿಧಾನವಾಗಿ ತನ್ನ ಕಾರ್ಯವ್ಯಾಪ್ತಿಯನ್ನೂ ವಿಸ್ತರಿಸಿಕೊಂಡಿತು. ಮಹಿಳೆಯರ ಶಿಕ್ಷಣ, ಮಕ್ಕಳ ಶಿಕ್ಷಣ, ಅಂಗವಿಕಲರ ಪುನರ್ವಸತಿ, ನಿರಾಶ್ರಿತರ ಮಕ್ಕಳಿಗೆ ನೆಲೆ, ಯುದ್ಧರೋಗಿಗಳಿಗೆ ಆಸ್ಪತ್ರೆ, ಹೀಗೆ ಅದರ ವಿಸ್ತಾರ ಹರಡುತ್ತಾ ನಡೆಯಿತು. 1981ರಲ್ಲಿ Payam-E-Zam (ಮಹಿಳೆಯರ ಸಂದೇಶ) ಎನ್ನುವ ಪತ್ರಿಕೆ ಪ್ರಾರಂಭಿಸಿದರು. ಅದರಲ್ಲಿ ಮಹಿಳೆಯರಿಗೆ ಬೇಕಾದ ಮೂಲಭೂತ ಅಗತ್ಯವನ್ನು ವಿವರಿಸುವುದರಿಂದ ಹಿಡಿದು ಯುದ್ಧದ ಪರಿಣಾಮದವರೆಗೆ ಎಲ್ಲ ವಿಚಾರಗಳನ್ನು ಪ್ರಸ್ತಾಪಿಸಲಾಗುತ್ತಿತ್ತು.

ಮೀನಾರವರ ಕಾರ್ಯವೈಖರಿ ದೇಶದಾಚೆಗೂ ಹರಡಿತು. ಫ್ರಾನ್ಸ್‌ನ 'ಫ್ರೆಂಚ್ ಸೋಷಿಯಲಿಸ್ಟ್ ಪಾರ್ಟಿ ಕಾಂಗ್ರೆಸ್'ನ ಸಮ್ಮೇಳನಕ್ಕೆ ಅವರಿಗೆ ಆಹ್ವಾನ ಬಂತು. ಆ ಸಮ್ಮೇಳನದಲ್ಲಿ ಮೀನಾ ಅಫ್ಘನ್ ಮಹಿಳೆಯರ ಸ್ಥಿತಿಗತಿಗಳನ್ನು ಅಲ್ಲಿದ್ದವರ ಮನಕಲಕುವಂತೆ ವಿವರಿಸಿದರು. ಆ ಸಮ್ಮೇಳನ ಮತ್ತು ಅಲ್ಲಿ ಆಗಮಿಸಿದ್ದ ಎಲ್ಲ ದೇಶಗಳ ಗಣ್ಯರು ಮೀನಾರನ್ನು ಅಭಿನಂದಿಸಿದ್ದೇ ಅಲ್ಲದೆ ಅವರ ಹೋರಾಟಕ್ಕೆ ಬೆಂಬಲ ನೀಡುವುದಾಗಿ ಘೋಷಿಸಿದರು. ಮೀನಾ ಅದೇ ಪ್ರವಾಸದಲ್ಲಿ ಇತರ ಯೂರೋಪ್ ರಾಷ್ಟ್ರಗಳನ್ನು ಸಂದರ್ಶಿಸಿದರು.

ಮೀನಾ ನಿಧಾನವಾಗಿ ಮತ್ತು ನಿಶ್ಚಲವಾಗಿ ತಮ್ಮ ಪ್ರಭೆ ಹರಡತೊಡಗಿದ್ದರು. ಅಫ್ಘನ್ ಮಹಿಳೆಯರ ಕಣ್ಮಣಿಯಾದರು. ಅವರ ಹೋರಾಟ ರಷ್ಯದ ಯುದ್ಧದ ವಿರುದ್ಧವಾಗಿತ್ತು ಮತ್ತು ಮೂಲಭೂತವಾದಿಗಳ ವಿರುದ್ಧವಾಗಿತ್ತು. ಮೀನಾರ ಜನಪ್ರಿಯತೆ ಮತ್ತು ಕಾರ್ಯವ್ಯಾಪ್ತಿಗಳು ಹೆಚ್ಚತೊಡಗಿದಂತೆ ಮೂಲಭೂತವಾದಿಗಳ ಕಣ್ಣು ಕೆಂಪಾಗತೊಡಗಿತು. ಅವರು ತಮ್ಮ ಕವನದಲ್ಲಿ ಹೇಳಿಕೊಂಡಿರುವಂತೆ ಮೂಲಭೂತವಾದಿಗಳ ಪಾಲಿಗೆ ಬಿರುಗಾಳಿಯೇ ಆಗಿದ್ದರು. ಕೇವಲ ಮೂವತ್ತು ವರ್ಷದ ಮೀನಾ ಅಫ್ಘನ್ ಮೌಲ್ವಿಗಳಿಗೆ ಮತ್ತು ಧರ್ಮನೇತಾರರಿಗೆ ವಿಶ್ವಸ್ವರೂಪಿಯಾಗಿ ಹೆದರಿಸಲಾರಂಭಿಸಿದರು. ಇನ್ನು ಮೀನಾರನ್ನು ಸಹಿಸುವುದು ಧರ್ಮ ಭೀರುಗಳಿಗೆ ಸಾಧ್ಯವೇ ಆಗಲಿಲ್ಲ.

1987 ಫೆಬ್ರವರಿ 4ರಂದು ಪಾಕೀಸ್ಥಾನದ ಕ್ವೆಟ್ಟಾದಲ್ಲಿ ಬೀಡು ಬಿಟ್ಟಿದ್ದ ಮೀನಾರನ್ನು KHAD ನ ಏಜೆಂಟರು ಕೊಂದು ಹಾಕಿದರು (KHAD ಎನ್ನುವುದು K.G.B. ಯ ಅಫ್ಘನ್ ಶಾಖೆ) ಮೂವತ್ತು ವರ್ಷದ ಒಬ್ಬ ಮಹಿಳೆಯನ್ನು ಕೊನೆಗಾಣಿಸಲು K.G.B. ಯ ಕಾರ್ಯಕರ್ತರು ಆಕೆ ತನ್ನ ದೇಶಬಿಟ್ಟು ಪರದೇಶಕ್ಕೆ ಬರುವುದನ್ನು ಕಾಯಬೇಕಾಯಿತು ಎಂದರೆ ಆಕೆ ತನ್ನ ನೆಲದಲ್ಲಿ ಸ್ಥಾಪಿಸಿದ ಜನಪ್ರಿಯತೆಯ ಅರಿವಾಗುತ್ತದೆ.

ಮೀನಾ ಸ್ಥಾಪಿಸಿದ RAWA ಸಂಸ್ಥೆ ಈಗಲೂ ಕೆಲಸ ಮಾಡುತ್ತಿದೆ. ಇಂದಂತೂ ಹಿಂದೆಂದಿಗಿಂತಾ ಹೆಚ್ಚಿನ ಸವಾಲುಗಳು ಈ ಮಹಿಳೆಯರ ಮುಂದಿದೆ. ತಾಲಿಬಾನ್ ಯುದ್ಧದ ಕಾರಣವಾಗಿ ಈ ಸಂಸ್ಥೆ ತನ್ನ ಕಾರ್ಯಸ್ಥಾನವನ್ನು ಪಾಕಿಸ್ತಾನದ ಕ್ವೆಟ್ಟಾಗೆ ಸ್ಥಳಾಂತರಿಸಿಕೊಂಡಿದೆ. ಹಣದ ಅಭಾವ ಕಾಡುತ್ತಿದೆ ಆದರೂ ಈ ಧೀರ ಮಹಿಳೆಯರು ಅಫ್ಘಾನ್ ಮಹಿಳೆಯರಿಗಾಗಿ ಸತತ ಶ್ರಮಿಸುತ್ತಿದ್ದಾರೆ. (ಈ ಸಂಸ್ಥೆಯ ಬಗ್ಗೆ ತಿಳಿಯ ಬಯಸುವವರು ಈ ವೆಬ್‌ಸೈಟ್‌ಗೆ ಸರ್ಫ್ ಮಾಡಬಹುದು. www.rawa.org.)

# ರಜತಪರದೆಯಲ್ಲಿ ಸುಶ್ಮಿತಾ

'ಗುಡ್ಡಗಾಡುಗಳ ಪ್ರಾಕೃತಿಕ ಸಿರಿವೈಭವ, ಹಚ್ಚ ಹರಿಸಿನ ಗಿರಿ ಕಣಿವೆಗಳು, ನಿರ್ಮಲ ಹವೆ ಮತ್ತು ಮುಗ್ಧ ಅಮಾಯಕ ಜನರು' ಹೀಗೆ ನೆನಪಿಸಿಕೊಂಡಂತೆಲ್ಲಾ ನಾಸ್ಟಲಜಿಕ್ ಆಗಿ ಬಿಡುವ ಸುಶ್ಮಿತಾ ಬ್ಯಾನರ್ಜಿ ಬಂಗಾಳದ ಹೆಣ್ಣು ಮಗಳು. ಆಫ್ಘಾನಿಸ್ಥಾನದ ಮಾರ್ವಾಡಿ ಜನಬಾಜ್‌ಖಾನ್‌ನನ್ನು ಮದುವೆಯಾದ ನಂತರ ಕಾಬೂಲ್‌ನಿಂದ 120 ಕಿಲೋಮೀಟರ್ ದೂರವಿರುವ ಶರಾನಾದಲ್ಲಿ ಗಂಡನ ಮನೆಯಲ್ಲಿದ್ದಾಗ ಆರು ವರ್ಷಗಳ ಕಾಲ ಆ ದೇಶದ ಸೊಗಸನ್ನು ಕಂಡವಳು - ''ಅಲ್ಲಿ ಗಂಡು ಮತ್ತು ಹೆಣ್ಣು ಜೊತೆ ಜೊತೆಯಾಗಿಯೇ ಕೆಲಸ ಮಾಡುತ್ತಿದ್ದುದನ್ನು ಕಂಡೆ. ಹುಡುಗಿಯರು ಕಾರು ನಡೆಸುತ್ತಿದ್ದರು; ಶಾಲೆಗಳಿಗೆ, ಕಾಲೇಜುಗಳಿಗೆ ಹೋಗುತ್ತಿದ್ದರು. ಬ್ಯೂಟಿ ಪಾರ್ಲರುಗಳಿಗೆ ಹೋಗುತ್ತಿದ್ದರು. ಹಾಗೆಯೇ ಸಾರ್ವಜನಿಕವಾಗಿ ಸಿಗರೇಟು ಸೇದುತ್ತಿದ್ದರು. ಈ ಚಿತ್ರ ತಾಲಿಬಾನ್‌ರು ಬಂದ ನಂತರ ಸಂಪೂರ್ಣ ಬದಲಾಯಿತು,'' ಎನ್ನುತ್ತಾರೆ ಸುಶ್ಮಿತಾ.

ಆಫ್‌ಘಾನಿಸ್ಥಾನದ ತನ್ನ ಅನುಭವವನ್ನು ಕುರಿತು ಸುಶ್ಮಿತಾ ಮೂರು ಪುಸ್ತಕಗಳನ್ನು ಬರೆದಿದ್ದಾರೆ ; ಕಾಬೂಲಿವಾಲಾ ಬೆಂಗಾಲಿ ಬಹು, ತಾಲಿಬಾನ್, ಆಫ್‌ಘಾನ್ ಓ ಆಮಿ, ಏಕ್ ವರ್ನೋಮಿಥೇಯೇ ನೋಯ್ - ಈ ಮೂರು ಪುಸ್ತಕಗಳು ಮಾರುಕಟ್ಟೆಯಲ್ಲಿ ಬಿಸಿಬಿಸಿಯಾಗಿ ಕ್ಷಣಾರ್ಧದಲ್ಲಿ ಮಾರಾಟವಾದವು.

ಕಲ್ಕತ್ತೆಯ ಸೈನಾಧಿಕಾರಿಯೊಬ್ಬರ ಮಗಳಾದ ಸುಶ್ಮಿತಾ ತನ್ನ ಗೆಳತಿಯ ಮನೆಯಲ್ಲಿ 1986ರಲ್ಲಿ ಜನ್‌ಬಾಜ್‌ನನ್ನು ಭೇಟಿಯಾದಳು. ಸ್ನೇಹ ಪ್ರೇಮಕ್ಕೆ ತಿರುಗಿತು. ಹೆತ್ತವರ ಇಚ್ಛೆಗೆ ವಿರುದ್ಧವಾಗಿ ಅವರನ್ನು ಮದುವೆಯಾದರು. ನಂತರ ಆಫ್‌ಘಾನಿಸ್ಥಾನದಲ್ಲಿ ತನ್ನ ಗಂಡನ ದೊಡ್ಡ ಕುಟುಂಬವನ್ನು ಸೇರಲು ಅಲ್ಲಿಗೆ ತೆರಳಿದರು.

1993ರವರೆಗೂ ಎಲ್ಲಾ ಚೆನ್ನಾಗಿಯೇ ಇತ್ತು. ಸುಶ್ಮಿತಾ ಅತ್ತೆಯ ಮನೆಯವರಿಗೆ ಒಲವಿನ ಸೊಸೆಯಾಗಿಯೇ ಇದ್ದಳು. ಅವಳಿದ್ದ ಹಳ್ಳಿಯೂ ಅವಳನ್ನು ಗ್ರಾಮದ ಸೊಸೆಯಾಗಿ ಸ್ವೀಕರಿಸಿತ್ತು. ಆದರೆ ಪರಿಸ್ಥಿತಿ ಕ್ರಮೇಣ ಬದಲಾಯಿತು. ಅವಳನ್ನು ಮನೆಯಿಂದ ಹೊರಗೆ ಹೋಗಲು ಬಿಡಲಿಲ್ಲ, ಊಟ ಕೊಡದೆ ಹಲವಾರು ದಿನಗಳು ಅವಳನ್ನು ಅತ್ತೆಯ ಮನೆಯಲ್ಲಿ ಹೊಡೆಯಲಾಯಿತು. ಹಳ್ಳಿಯ ಜನರೂ ಅವಳ ಮೇಲೆ ವಕ್ರದೃಷ್ಟಿ ಬೀರಿದರು. 'ಆಫ್‌ಘಾನ್ನರು ಅತ್ಯಂತ ಸರಳ ಜನ. ತಾಲಿಬಾನ್‌ರ ಆಣತಿಯಿಂದಾಗಿ ಹೀಗೆ ವರ್ತಿಸಿದರು', ಎನ್ನುತ್ತಾರೆ ಸುಶ್ಮಿತಾ.

ಆಗ ಆಫ್‌ಘಾನಿಸ್ತಾನ್ ಬಿಟ್ಟು ಭಾರತಕ್ಕೆ ಬರಲು ಸುಶ್ಮಿತಾ ಪ್ರಯತ್ನಿಸಿದರೂ ಅವರು ಅದರಲ್ಲಿ ಯಶಸ್ವಿಯಾಗಲಿಲ್ಲ. ಅಂತೂ ಕೊನೆಗೆ 1995ರಲ್ಲಿ ಎಲ್ಲರ ಕಣ್ಣು ತಪ್ಪಿಸಿ ಸುಶ್ಮಿತಾ ಭಾರತಕ್ಕೆ ವಾಪಸ್ಸಾದರು. ಆಫ್‌ಘಾನಿಸ್ಥಾನದ ವೀಸಾ ಅಧಿಕಾರಿ ಸುಶ್ಮಿತಾಗೆ ಶಬಸಾಮ್ ಬೇಗಂ ಎನ್ನುವ ಸುಳ್ಳು ಹೆಸರಿನಲ್ಲಿ ಪಾಸ್‌ಪೋರ್ಟ್ ನೀಡಿ ಉಪಕರಿಸಿದರು. ತಾಲಿಬಾನ್‌ರು ಕಾಬೂಲನ್ನು ವಶಪಡಿಸಿಕೊಳ್ಳುವುದಕ್ಕೆ ಒಂದು ವರ್ಷಕ್ಕೆ ಮುಂಚೆಗೆ ಸುಶ್ಮಿತಾ ಭಾರತ ಸೇರಿದರು.

ಸುಶ್ಮಿತಾ ಇಷ್ಟೆಲ್ಲ ಸಾಹಸದ ನಂತರ ಇಂದು ಕಥೆಯಾಗಿದ್ದಾರೆ, ಚಿತ್ರವೊಂದಕ್ಕೆ. ಹಿಮಾಚಲದ ಲೇ ನಲ್ಲಿ ಚಿತ್ರೀಕರಣವಾಗಲಿರುವ ಈ ಚಿತ್ರದಲ್ಲಿ ಸುಶ್ಮಿತಾಳ ಪಾತ್ರವನ್ನು ಮೋನಿಷಾ ಕೊಯಿರಾಲಾ ಮಾಡುತ್ತಿದ್ದರೆ, ಗಂಡನ ಪಾತ್ರವನ್ನು ನವಾಬ್‌ಖಾನ್ ಮಾಡುತ್ತಿದ್ದಾರೆ. ದ್ವಿಭಾಷೆಯಲ್ಲಿ ಚಿತ್ರೀಕರಣಗೊಳ್ಳುತ್ತಿರುವ ಈ ಚಿತ್ರ 'Escape' ಸುಶ್ಮಿತಾ ಬರೆದ ಪುಸ್ತಕಗಳ ವಸ್ತುವನ್ನೇ ಆಧರಿಸಿದೆ. ಆದರೆ ಚಿತ್ರಕಥೆಯನ್ನೇ ಲೇಖಕಿಗೆ ತೋರಿಸದೆ ಚಿತ್ರ ನಿರ್ಮಾಪಕರು ಅನ್ಯಾಯ ಮಾಡಿದ್ದಾರೆ, ಎನ್ನುವುದು ಸುಶ್ಮಿತಾರ ಕೊರಗು.

ತಾಲಿಬಾನ್ ಮತ್ತು ಆಫ್‌ಘಾನಿಸ್ಥಾನ ನೆರೆಹೊರೆಯ ಎಲ್ಲರ ಬದುಕನ್ನು ಕಲುಕುತ್ತಿದೆ. ಮಾಧ್ಯಮಗಳಿಗೆ ಆಹಾರವಾಗುತ್ತಿದೆ. ಹೀಗಿರುವಾಗ ಚಿತ್ರಪ್ರಪಂಚ ಏಕೆ ಇದರಿಂದ ಹೊರತಾಗಬೇಕು?

ಕೃಪೆ : ದಿ ವೀಕ್

★ ★ ★

# ಮಹಿಳೆಯರು - ಯುದ್ಧ ಮತ್ತು ಶಾಂತಿಯಲ್ಲಿ

- ರೀತು ಮೆನನ್

ಅಂತರರಾಷ್ಟ್ರೀಯ ಮಹಿಳಾ ಚಳುವಳಿಯು ಬಹಳ ವರ್ಷಗಳ ಹಿಂದೆಯೇ ಆಫ್‌ಘಾನಿಸ್ತಾನದಲ್ಲಿ ತಾಲೀಬಾನರು ಸೃಷ್ಟಿಸಿದ ಭಯೋತ್ಪಾದಕ ವಾತಾವರಣದ ಬಗ್ಗೆ ವಿಶ್ವದ ಗಮನ ಸೆಳೆಯಲು ಪ್ರಯತ್ನಿಸಿತ್ತು. ನಾವುಗಳು ಆಫ್‌ಘಾನಿಸ್ತಾನದ ಕ್ರಾಂತಿಕಾರಿ ಮಹಿಳಾ ಸಂಘಟನೆ(RAWA) ಯೊಂದಿಗೆ ನಮ್ಮ ಸಂಬಂಧವನ್ನು ಬೆಸೆದಿದ್ದೆವು. ವಿಶ್ವಸಂಸ್ಥೆಯ 189 ಸದಸ್ಯರಾಷ್ಟ್ರಗಳಿಗೂ ನಮ್ಮ ಮನವಿಯನ್ನು ಸಲ್ಲಿಸಿದ್ದೆವು. ಮಹಿಳೆಯರ ಹಕ್ಕುಗಳ ದಮನ ಮಾಡುತ್ತಿರುವ ತಾಲಿಬಾನ್ ಸರ್ಕಾರವನ್ನು ಮಾನ್ಯ ಮಾಡಕೂಡದೆಂದು ಎಲ್ಲ ರಾಷ್ಟ್ರೀಯ ಸರ್ಕಾರಗಳ ಮೇಲೂ ಒತ್ತಡ ತಂದಿದ್ದೆವು.

'ನಾಗರೀಕ' ಜಗತ್ತು ತಾಲಿಬಾನ್‌ನನ್ನು ಮಾನ್ಯ ಮಾಡಲಿಲ್ಲ. ಹಾಗೆಂದೂ ಅವರು ತಾಲಿಬಾನ್ ವಿರುದ್ಧ ಹೋರಾಡಲು ಇಲ್ಲ. ಏಕೆಂದರೆ, ಅಲ್ಲಿ ತೊಂದರೆಯಾಗುತ್ತಿದುದು ಸ್ತ್ರೀಯರಿಗೆ ಮಾತ್ರ, ಮಾಧ್ಯಮಗಳಿಗೂ ಆಫ್‌ಘಾನಿಸ್ಥಾನದ ಅಷ್ಟೊಂದು ಆಸಕ್ತಿಯ ಕೇಂದ್ರವಾಗಲಿಲ್ಲ. ಅದು ಶಾಂತಿಯ ಕಾಲ. ಆದರೆ ಅಲ್ಲಿನ ಮಹಿಳೆಯರಿಗೆ ಶಾಂತಿಯ ಕಾಲದ ಅಸ್ತ್ರಗಳು ಯುದ್ಧಕಾಲದ ಅಸ್ತ್ರಗಳಿಗಿಂತ ಭಿನ್ನವಾಗೇನೂ ಕಂಡುಬರಲಿಲ್ಲ. ಏಕೆಂದರೆ ಹಿಂಸೆಯೆನ್ನುವುದು ಪುರುಷಾಧಿಪತ್ಯದ ಭಾಗವಾಗಿಯೇ ಅಂತರ್ಗಾಮಿಯಾಗಿ ಇರುತ್ತದೆ. ಯುಗೋಸ್ಲ್ಯಾವಿಯಾದ ಸ್ತ್ರೀವಾದಿ ರಾಡಾ ಇವೆಕೊವಿಕ್ ಹೇಳುವಂತೆ ಪಿತೃಪ್ರಾಧಾನ್ಯತೆಯ ಜಾಗತೀಕರಣವು ಅತ್ಯಂತ ಪ್ರಾಚೀನವಾದದ್ದು. ಹೆಂಗಸರನ್ನು ನಿಯಂತ್ರಣಕ್ಕೊಳಪಡಿಸಲು ಹಿಂಸೆ ಅತ್ಯಂತ ಅಗತ್ಯವಾದ ಅಂಶ ಎಂಬುದನ್ನು ಕಂಡು ಕೊಳ್ಳಲಾಗಿದೆ.

ಈ ವಿಚಾರಗಳು ತಲೆಯಲ್ಲಿ ಹೊಕ್ಕು ಮೆಷಿನ್‌ಗನ್‌ನಂತೆ ಆಸ್ಫೋಟಿಸುತ್ತಿದ್ದರೆ, ನಾನು ಶ್ರೀಲಂಕಾದಿಂದ ಟ್ರಿಂಕೋಮಲಿಯತ್ತ ಕೆಲವು ವಾರಗಳ ಹಿಂದೆ ಪ್ರಯಾಣಿಸುತ್ತಿದ್ದೆ. ಚಿತ್ತಗಾಂಗ್‌ನ ಗಿರಿಶ್ರೇಣಿಗಳಲ್ಲಿ, ನೇಪಾಳ, ದಕ್ಷಿಣ ಏಷ್ಯಾ ಹೀಗೆ ಈ ಭಾಗಗಳಲ್ಲೆಲ್ಲಾ ಮಹಿಳಾ ಸಂಘಟಣೆಗಳು ಭಯೋತ್ಪಾದನೆಯನ್ನು ಕುರಿತು ಚರ್ಚಿಸುತ್ತಲೇ ಬಂದಿವೆ. ಈ ಎಲ್ಲಾ ಪ್ರಾಂತ್ಯಗಳಲ್ಲಿ ಭಯೋತ್ಪಾದನೆಯು ವ್ಯಾಪಕವಾಗಿ ವಿಸ್ತರಿಸಿದೆ. ಇದರ ಬಿಸಿಯನ್ನು ಮಹಿಳೆಯರೇ ಹೆಚ್ಚು ಅನುಭವಿಸುತ್ತಾ ಬಂದಿದ್ದಾರೆ. ಇಲ್ಲೆಲ್ಲಾ ಧಾರ್ಮಿಕ ಮೂಲಭೂತವಾದದೊಂದಿಗೆ, ಪಿತೃ ಪ್ರಾಧಾನ್ಯತೆಯು ಸೇರಿಕೊಂಡು ಮಹಿಳೆಯರ ನೋವಿಗೆ ಕಾರಣವಾಗಿದೆ.

ಟ್ರಿಂಕೋಮಲಿ ಸಿಂಹಳದ ಈಶಾನ್ಯ ದಿಕ್ಕಿನಲ್ಲಿದೆ. ಭಯೋತ್ಪಾದನೆಯ ಚಟುವಟಿಕೆಗಳು ದಟ್ಟವಾದ ಜಾಗವದು. ಅಲ್ಲಿ ಗಂಭೀರ ಪರಿಸ್ಥಿತಿ ಇತ್ತು. ನಾವು ಉಳಿದುಕೊಂಡಿದ್ದ ಹೋಟೆಲ್‌ನ ಐವತ್ತು ಗಜದ ಅಂತರದಲ್ಲಿ ಸುಟ್ಟು ಬೂದಿಯಾಗಿದ್ದ ಹೋಟೆಲ್‌ನ ಅವಶೇಷಗಳು ಕಾಣಿಸುತ್ತಿದ್ದವು. ಆ ಬೂದಿಯಾದ ಹೋಟೆಲ್‌ನವರು 'ಟೈಗರ್'ಗಳನ್ನು ಖುಷಿಯಾಗಿಡದಿದ್ದಕ್ಕೆ ಅನುಭವಿಸಿದ ಫಲವಿದು. ಆದ್ದರಿಂದ ಸಂಜೆಯ ನಂತರ ನಮಗೆ ದೂರಕ್ಕೆ ಎಲ್ಲೂ ಹೋಗದಿರಲು ಸೂಚಿಸಲಾಗಿತ್ತು.

ಇಲ್ಲಿ ನಮಗೆ ಅನುಮಾನಗಳು ಕಾಡಲಾರಂಭಿಸಿದವು. ಬಾಟಿಕೋಲಾದ ಮಹಿಳೆಯರು ಈ ಸಭೆಗೆ ಬರಲು ಸಾಧ್ಯವಾಗುತ್ತದೋ ಇಲ್ಲವೋ ಎಂಬ ಚಿಂತೆ ನಮ್ಮನ್ನು ಕಾಡಿತು. ಕಳೆದ ವಾರವಷ್ಟೇ ಬಾಟ್ಟಿಯಲ್ಲಿ ಹೆಚ್ಚಿನ ಸಂಖ್ಯೆಯ ಮಕ್ಕಳನ್ನು ಸೈನ್ಯಕ್ಕೆ ಸೇರಿಸಿಕೊಳ್ಳಲಾಗಿತ್ತು. ಆದ್ದರಿಂದ ಯಾವುದೇ ಸಂದರ್ಭದಲ್ಲೂ ಟೈಗರ್‌ಗಳ ಆಕ್ರಮಣವನ್ನು ನಿರೀಕ್ಷಿಸಲಾಗಿತ್ತು. ನಮ್ಮ ಸಭೆಯಲ್ಲಿ ನಾವು ಭಯೋತ್ಪಾದನೆ ಮತ್ತು ಮಾನವ ಹಕ್ಕುಗಳನ್ನು ಕುರಿತು ಚರ್ಚಿಸುತ್ತಿರುವ ವಿಷಯದ ಸುದ್ದಿ ಹೊರಗೆ ಹೋದರೆ ನಮಗೆ ಆಪತ್ತು ಕಾದಿರುತ್ತಿತ್ತು.

ಶಾಂತಿ ಕಾಲದಲ್ಲಾಗಲೀ, ಯುದ್ಧವನ್ನು ನಿಗ್ರಹಿಸುವುದರಲ್ಲಿ ಮುಂಚೂಣಿಯಲ್ಲಿದ್ದ ಶ್ರೀಲಂಕಾದ ಮಹಿಳೆಯರು ಭಯೋತ್ಪಾದನೆಯ ಹೋರಾಟದಲ್ಲಿ ನಮಗೆಲ್ಲರಿಗಿಂತ ಮುಂದಿದ್ದರು. ಆಫ್‌ಘಾನಿಸ್ಥಾನದ ಮಹಿಳೆಯರಿಗಾದಂತೆ ಇಡೀ ವಿಶ್ವವೆಲ್ಲಾ ಭಯೋತ್ಪಾದನೆಯ ವಿರುದ್ಧದ ಹೋರಾಟವನ್ನು ಅವರಿಗೆ ಬಿಟ್ಟು ಬಿಟ್ಟಿದ್ದರು. ಬಾಟಿಕೋಲಾ ಮತ್ತು ಟ್ರಿಂಕೋಮಲಿಯ ಮಹಿಳೆಯರು ಟೈಗರ್ ನಾಯಕರಿಗೆ ತಿಂಗಳಿಗೊಮ್ಮೆ ವರದಿ ಒಪ್ಪಿಸಬೇಕಿತ್ತು. ಮಾನವೀಯ ಕಲ್ಯಾಣದ ಕಾರ್ಯಗಳಿಗೆ ಅವರು ಎಷ್ಟು ಹಣ ಸಂಗ್ರಹಿಸಿದ್ದಾರೆ. ಅದನ್ನು ಹೇಗೆ ಬಳಸುತ್ತಿದ್ದಾರೆ, ಅವರು ಕಾರ್ಯಗತ ಮಾಡಲು ಹಾಕಿ ಕೊಂಡಿರುವ

ಯೋಜನೆಗಳಾವುವು ಎಂಬುದನ್ನು ತಿಳಿಸಬೇಕು. ಯುದ್ಧ ಬೇಡವೆಂದು ಹೇಳಿ ಪೋಸ್ಟರ್ ಹಾಕಿದ ಮಹಿಳೆಯರನ್ನು ಟೈಗರ್‌ಗಳು ತಮ್ಮ hit list ನಲ್ಲಿ ಸೇರಿಸಿಕೊಂಡಿದ್ದಾರೆ. ಟೈಗರ್ ನಾಯಕರು ಕೇಳಿದ ವರದಿಗಳನ್ನು ಕೊಡಲಿಲ್ಲವೆಂಬ ಕಾರಣಕ್ಕಾಗಿಯೇ ಹಲವಾರು ಮಂದಿ ಮರಣವನ್ನಪ್ಪಿದ್ದಾರೆ.

ಸಿಂಹಳದ ಮಹಿಳೆಯರು 'ಶಾಂತಿ'ಯನ್ನು ಪ್ರಶ್ನಿಸಿದ್ದಾರೆ. ಪ್ರತಿಬಾರಿ ಸರ್ಕಾರ ಮತ್ತು ಟೈಗರ್‌ಗಳ ನಡುವೆ ಶಾಂತಿ ಸಂಧಾನವಿದ್ದಾಗಲೆಲ್ಲಾ 'ಆಗ ಇನ್ನೂ ಹೆಚ್ಚಿನ ಕ್ರೌರ್ಯ ಕಂಡು ಬರುತ್ತದೆ' ಎಂದೆನ್ನುತ್ತಾರೆ. ಈ ಭಾವನೆಯನ್ನೇ ಹಂಚಿಕೊಂಡ ಪಾಕಿಸ್ಥಾನದ ಮಹಿಳೆಯರು ತಮ್ಮ ದೇಶದಲ್ಲೂ ಇಂತಹುದೇ ಸ್ಥಿತಿಯನ್ನು ಗುರುತಿಸಿಕೊಂಡರು. ಯುದ್ಧದ ಸಮಯದಲ್ಲಿ ಮತ್ತು ಯುದ್ಧಾನಂತರ 'ಶಾಂತಿ' ಎಂಬ ಹೇಳುವ ಶಾಂತಿ ಮಂತ್ರವೊಂದೇ: ರಾಷ್ಟ್ರದ ಭದ್ರತೆಯನ್ನು ಅಲ್ಲಾಡಿಸಬೇಡಿ. ಧಾರ್ಮಿಕ ಆಚರಣೆಗಳನ್ನು ಪ್ರಶ್ನಿಸಬೇಡಿ. ಲಿಂಗ ಅಸಮಾನತೆಯನ್ನು ಪ್ರತಿಭಟಿಸಬೇಡಿ ಈ ರೀತಿಯಾಗಿ ಭಾವುಕವಾಗಿ ನಿಯಂತ್ರಿಸಿದ ಪ್ರತಿರೋಧದ 'ಶಾಂತಿ' ಯಾರಿಗೆ ಬೇಕಾಗಿದೆ? ನಮಗೆ ಬೇಕಾಗಿರುವುದು ಮಹಿಳೆಯರ ಹಕ್ಕುಗಳ ರಕ್ಷಣೆ ಮತ್ತು ಶಾಂತಿಯೆನ್ನುವುದು ಪ್ರಜಾಪ್ರಭುತ್ವದ ನೆಲೆಯಲ್ಲಿ ದೊರಕಬೇಕು - ಎನ್ನುವುದು ಪಾಕಿಸ್ತಾನಿ ಮಹಿಳೆಯರ ವಾದ.

ಜೂನ್ 2001ರಂದು ಇಂತಹ ನಿರ್ಣಯವೊಂದನ್ನು NEGAR ಸಂಘಟನೆಯು ಪ್ರಕಟಿಸಿತು. ಈ ಸಂಘಟನೆಯಲ್ಲಿ ಆಫ್ಘಾನಿಸ್ಥಾನದಿಂದ ಗಡೀಪಾರಾದ 300 ಜನ ಮಹಿಳೆಯರಿದ್ದಾರೆ. ಬುಶ್‌ನ ಸಂತತಿಗಾಗಲೀ, ಲಾಡೆನ್‌ನ ಸಂತತಿಗಾಗಲೀ 'ಭಯೋತ್ಪಾದನೆ' ಮತ್ತು 'ಭಯೋತ್ಪಾದನೆ ವಿರೋಧ'ಯೆಂಬ ಶಬ್ದಕ್ಕೆ ಒಂದೇ ಅರ್ಥ ಯುದ್ಧಕ್ಕೆ ಸಂಬಂಧಿಸಿದ ಶಬ್ದ, ಪುರುಷ ಅಹಂಕಾರದ ಶಬ್ದ. ಅಂತಹ ಒಂದು ಶಾಬ್ದಿಕ ಚಿಂತನೆಯಲ್ಲಿ ಅಹಿಂಸೆಯೆಂಬ ಶಬ್ದಕ್ಕೆ ಅರ್ಥವೇ ಇಲ್ಲ. ಪ್ರತಿಯೊಬ್ಬರೂ ಇದನ್ನು 'ನೈತಿಕತೆಯ ಸಮರ', ಎನ್ನಬಹುದು. 'ದುಷ್ಟ ಶಿಕ್ಷೆ' ಎನ್ನಬಹುದು. 'ಧರ್ಮಯುದ್ಧ' ಎನ್ನಬಹುದು. ಆದರೆ ಇದು ಕೇವಲ ಯುದ್ಧ ಮಾತ್ರ. ಅಸಂಖ್ಯ ಅಮಾಯಕರ ಕಗ್ಗೊಲೆ; ಹಸಿ ಕಂದಮ್ಮಗಳ ಮಾರಣ ಹೋಮ. ಇವುಗಳ ಜೊತೆಯಲ್ಲಿ ಸಾವಿಗೆ ಆಹ್ವಾನ ಮಾತ್ರ. ಶಾಂತಿಗಾಗಿ ದುಡಿಯುತ್ತಿರುವ ಮಹಿಳೆಯರು ಕೇಳುವುದು ಒಂದೇ ಪ್ರಶ್ನೆಯನ್ನು: 'ಸ್ವಸಮರ್ಥನೆ', 'ದೇಶದ ಹಿತ', 'ರಾಷ್ಟ್ರದ ಭದ್ರತೆ'- ಈ ಪದ ಪುಂಜಗಳನ್ನು ಉಚ್ಚರಿಸುತ್ತಿರುವವರು ಹಿಂಸೆಯನ್ನು ಸಮರ್ಥಿಸಲು ಸಾಧ್ಯವೇ?

ತಾಲಿಬಾನರಿರಲಿ, ನ್ಯಾಟೊ ಇರಲಿ, ಉತ್ತರ ಮೈತ್ರಿಕೂಟವಿರಲಿ, ಟೈಗರ್‌ಗಳಿರಲಿ - ವರ್ಣ, ವರ್ಗಕಾರಣಕ್ಕೆ, ಧರ್ಮ ಮತ್ತು ಭಾಷೆಯ ಕಾರಣಕ್ಕೆ ಭ್ರಾತೃತ್ವವನ್ನು ಬೆಳೆಸಿಕೊಳ್ಳುವ ಇಚ್ಛೆ ವ್ಯಕ್ತಪಡಿಸುವುದೂ ಪುರುಷಪ್ರಧಾನ ಹಾಗೂ ಪಿತೃಪ್ರಧಾನ ಸಂಸ್ಕೃತಿಯೇ. ಇಂತಹ ಸಂಘಟನೆಗಳಲ್ಲಿ ಮಹಿಳೆಯರ ಹಿತವೂ ಇರುವುದಿಲ್ಲ; ಹಾಗೆಯೇ ಅವು ಪ್ರಜಾಸತ್ತಾತ್ಮಕವೂ ಆಗಿರುವುದಿಲ್ಲ.

ಬಾಟಿಕೋಲದ ಮಹಿಳೆಯರು ಹೇಳುತ್ತಾರೆ: ''ನಮಗೆ ಶಾಂತಿಯೆಂದರೆ, ಒಂದು ಮನೆ, ತೆಂಗಿನ ಮರಗಳು, ನೀರು, ಸಮವಸ್ತ್ರವಿಲ್ಲದ ಪುರುಷರು'', ಆದ್ದರಿಂದಲೇ ಮಹಿಳೆಯರು ಶಾಂತಿ ಬೇಕೆನ್ನುವುದಕ್ಕೆ ಕಾರಣವೊಂದಿದೆ. ಅವರು ತಾಯಿಯರಾಗಿದ್ದಾರೆ, ಜೀವ ಪೋಷಕರಾಗಿದ್ದಾರೆ, ಎಂಬ ಕಾರಣಕ್ಕಾಗಿಯಲ್ಲ, ಆದರೆ ಯುದ್ಧದ ಭೀಕರತೆಯನ್ನು ಬಲ್ಲವರಾಗಿದ್ದಾರೆ. ಹೆಣ್ಣಿನ ಶೋಷಣೆಯನ್ನು ಅನುಭವಿಸಿದ್ದಾರೆ. ಕೌಟುಂಬಿಕ, ಧಾರ್ಮಿಕ ದೌರ್ಜನ್ಯ ಹಾಗೂ ರಾಜಕೀಯ ದೌರ್ಜನ್ಯದ ಬಿಸಿಯನ್ನು ಮಹಿಳೆಯರೇ ಹೆಚ್ಚು ಅನುಭವಿಸಿರುವುದು. ಮನೆಯಿಂದ, ಬೀದಿಯವರೆಗೂ ಮತ್ತು ರಣರಂಗದಲ್ಲೂ ಹೆಣ್ಣಿಗೆ ನೋವಿನ ಅನುಭವವಾಗಿರುವುದು ಹೆಚ್ಚು. ಖಾಸಗಿ ನೆಲೆಯಲ್ಲಾಗಲಿ, ಸಾರ್ವಜನಿಕರಂಗದಲ್ಲಾಗಲಿ ಅಧಿಕಾರದ ರಚನೆಗಳಿಂದ ಮಹಿಳೆಯರನ್ನು ಹೊರಗಿಟ್ಟಿರುವ ಚಾರಿತ್ರಿಕ ಸತ್ಯವೇ ಮಹಿಳೆಯರಿಗೆ ಶಾಂತಿ ಮತ್ತು ನ್ಯಾಯಕ್ಕಾಗಿ, ಪ್ರಜಾಪ್ರಭುತ್ವಕ್ಕಾಗಿ ಹೋರಾಡಲು ಪ್ರೇರೇಪಿಸುತ್ತದೆ. ಶಾಂತಿಗಾಗಿ ಹಂಬಲಿಸುವ ಸ್ತ್ರೀ ಸಂಸ್ಕೃತಿಯೇ ಮೂಲಭೂತವಾಗಿ ಅಧಿಕಾರಶಾಹಿಯ ರಚನೆಗಳನ್ನು ವಿಮರ್ಶಾತ್ಮಕವಾಗಿ ನೋಡುತ್ತದೆ ಮತ್ತು ವೈವಿಧ್ಯತೆ ಹಾಗೂ ಭಿನ್ನತೆಗಳ ನಡುವೆಯೂ ಆಕ್ರಮಣವಿಲ್ಲದೆ ಶಾಂತಿಯಿಂದ ಸಹಬಾಳ್ವೆ ಮಾಡುವುದನ್ನು ನಂಬುತ್ತದೆ.

ತಾಲಿಬಾನರು ತಮ್ಮ ಆಳ್ವಿಕೆಯಲ್ಲಿ ಶೇಕಡ 90ರಷ್ಟು ಜನರ ಮೇಲೆ 'ಶಾಂತಿ'ಯನ್ನು ವಿಧಿಸಿದ್ದೇವೆಂದೇ ನಂಬಿದ್ದರು. ಹೆಂಗಸರ ಮೇಲೆ ಅವರು ವಿಧಿಸಿದ್ದ ನಿಷೇದಗಳು ಕೂಡ ಅವರಿಗೆ 'ರಕ್ಷಣೆ'ಯನ್ನು ಕೊಡುವ ಶಾಂತಿಯುತ ಧರ್ಮಕಾರ್ಯವೆಂದೇ ಬಗೆದಿದ್ದರು.

**ಕೃಪೆ : ದಿ ಟೈಮ್ಸ್**

★ ★ ★

# ಭೂಮಿಯ ಹಕ್ಕಿಗಾಗಿ ಪಾದಯಾತ್ರೆ

ಇಂದು ಪಾದಯಾತ್ರೆ, ರಥಯಾತ್ರೆಗಳೆಲ್ಲಾ ರಾಜಕೀಯ ದೊಂಬರಾಟಗಳಾಗಿವೆ. ಪ್ರಚಾರಪ್ರಿಯ ರಾಜಕಾರಣಿಗಳ ಅಸ್ತ್ರಗಳಾಗಿವೆ. ಇಂತಹ ಸನ್ನಿವೇಶದಲ್ಲೂ ಇತ್ತೀಚೆಗೆ ಬಿಹಾರದಲ್ಲಿ ದಲಿತ ಮಹಿಳೆಯರ ಪಾದಯಾತ್ರೆಯೊಂದು ನಡೆಯಿತು. ಏಕತಾ ಪರಿಷತ್ತಿನ ನೇತೃತ್ವದಲ್ಲಿ ಜಮುಯಿ, ನಾವಡ, ನಲಂದ, ಗಯಾ, ಜಹನಾಬಾದ್ ಮತ್ತು ಪಾಟ್ನಾ - ಆರು ಜಿಲ್ಲೆಗಳಲ್ಲಿ ಮುನ್ನೂರಕ್ಕೂ ಹೆಚ್ಚು ಮಹಿಳೆಯರು ಪಾದಯಾತ್ರೆ ಹೊರಟರು. ತಾವು ದುಡಿಯುವ ನೆಲದ ಒಡೆತನದ ಹಕ್ಕಿಗಾಗಿ ಈ ಹೆಂಗಸರ ಯಾತ್ರೆ ಸಾಗಿತ್ತು.

ಬಿಹಾರದಲ್ಲಿ ಭೂಮಿಯ ಸಂಬಂಧವಾದ ಜಗಳಗಳೇ ಹೆಚ್ಚು. ಈ ಹಿಂದೆ ಉಳ್ಳವರ ಮತ್ತು ಇಲ್ಲದವರ ನಡುವಿನ ವೈಷಮ್ಯ ಹಿಂಸೆಗೆ ತಿರುಗಿ ನೂರಾರು ಜನಗಳನ್ನು ಬಲಿತೆಗೆದು ಕೊಂಡಿದೆ. ರಜಪುತರ ಕಾವಲು ಭಂಟರು ಮತ್ತು ಭೂಮಿಹಾರ್ ಭೂಮಾಲೀಕರು ಆಗಿಂದಾಗ್ಗೆ ದಲಿತ ಕೂಲಿಯಾಳುಗಳ ಮೇಲೆ ಆಕ್ರಮಣ ಮಾಡಿ ಪ್ರಹಾರ ನಡೆಸುತ್ತಲೇ ಬಂದಿದ್ದಾರೆ. ದಲಿತರು ತಮ್ಮ ದುಡಿಮೆಗೆ ತಕ್ಕ ಬೆಲೆ ಕೇಳುವುದೇ ಅವರ ಸಾವಿಗೆ ಕಾರಣವಾದದ್ದಿದೆ.

''ದಲಿತ ಪುರುಷರು ಇಂತಹ ಅನ್ಯಾಯಗಳ ವಿರುದ್ಧ ಹೋರಾಡುವುದಿಲ್ಲ. ಆದ್ದರಿಂದ ಈ ಹೋರಾಟವನ್ನು ನಾವು ಕೈಗೆತ್ತಿಕೊಂಡಿದ್ದೇವೆ. ನಮ್ಮ ಗಂಡಂದಿರಿಗಿಂತ, ಸೋದರರಿಗಿಂತ ನಾವು ದುಡಿಯುವ ನೆಲದ ಹಕ್ಕು ನಮಗೆ ಹೆಚ್ಚಿದೆ. ಹಾಗೆಯೇ ಹೋರಾಟದ ಕಿಚ್ಚು ನಮ್ಮಲ್ಲಿದೆ.'' ಎನ್ನುತ್ತಾರೆ, ಈ ಮಹಿಳೆಯರು.

ಕೃಷಿ ಸಂಬಂಧಿಯಾದ ಕೆಲಸಗಳಲ್ಲಿ ಶೇಕಡ 50 ಭಾಗದ ಕೆಲಸವನ್ನು ಮಾಡುವವರು ಮಹಿಳೆಯರು. ಬೀಜ ಬಿತ್ತುವ, ಸಸಿ ನೆಡುವ, ತೆನೆಕೊಯ್ಯುವ - ಎಲ್ಲಾ ಕೆಲಸಗಳನ್ನೂ ದಿನಕ್ಕೆ ಎಂಟು, ಹತ್ತು ಘಂಟೆಗಳ ಕಾಲ ಮಾಡುವವರು ಇಲ್ಲಿನ ಮಹಿಳೆಯರು. ಆದರೆ ರೈತ ಎಂದಾಗ, ಅದರಲ್ಲಿ ಮಹಿಳೆಯರ ಸೇರ್ಪಡೆಯೇ ಇರುವುದಿಲ್ಲ. ಆದ್ದರಿಂದಲೇ ಈ ಹೆಂಗಸರ ಬೇಡಿಕೆಯೆಂದರೆ ಉಳುವವನೇ ಭೂಮಿಗೆ ಒಡೆಯ, ಎಂದಾಗ ಆ ಒಡೆತನ ಹೆಂಗಸರಿಗೆ ಬರಬೇಕು. 'ಪಟ್ಟಾ' ಹೆಂಗಸರ ಹೆಸರಿನಲ್ಲಿಯೂ ಇರಬೇಕು. ಆದ್ದರಿಂದಲೇ ಬಿಹಾರದಲ್ಲಿ ದಲಿತ ಮಹಿಳೆಯರು ಭೂ ಒಡೆತವನ್ನು ಕೇಳುತ್ತಿರುವುದು. ಅನ್ಯಾಯ, ಅವಮಾನ ಮತ್ತು ಹಿಂಸೆಯನ್ನು ಮನೆಯ ಒಳಗೂ ಹೊರಗೂ ವಿರೋಧಿಸುವುದಕ್ಕಾಗಿ. ಈ ದಲಿತ ಮಹಿಳೆಯರಿಗೆ ಕುಡುಕ ಗಂಡಂದಿರು, ಗಂಡಂದಿರ ಬಹು ವಿವಾಹ ಸಂಬಂಧಗಳು, ಗಂಡನಿಂದ ಪರಿತ್ಯಕ್ತೆಯರು ಎಲ್ಲಕ್ಕೂ ಮಿಗಿಲಾಗಿ ಹೊಡೆತ, ಬಡಿತಗಳು - ಎಲ್ಲವೂ ಸೇರಿ ಬದುಕು ಘೋರವೆನಿಸಿವೆ. ಇಂತಹ ಸಂದರ್ಭದಲ್ಲಿ ತುಂಡುನೆಲದ ಒಡೆತನ ಸಿಕ್ಕರೆ, ಅವರು ದುಡಿದು ತಮ್ಮ ಮಕ್ಕಳನ್ನು ಸಾಕಬಹುದು ಮತ್ತು ತಲೆಯೆತ್ತಿ ಘನತೆಯಿಂದ ಬಾಳಬಹುದು.

ಭೂ ಒಡೆತನದ ಹಕ್ಕನ್ನು ಮಹಿಳೆಯರಿಗೆ ಕೊಡುವುದರಿಂದ ಬಹುರಾಷ್ಟ್ರೀಯ ಕಂಪೆನಿಗಳ ಹೊಡೆತವನ್ನು ತಪ್ಪಿಸುವುದು ಸುಲಭವೆಂದು ಅಭಿಪ್ರಾಯ ಪಡುತ್ತಾರೆ ಏಕತಾಪರಿಷತ್ತಿನ ಸಂಘಟಕರು. ಪುರುಷರು ಭೂಮಿಯನ್ನು ಸರಕೆಂದು ಭಾವಿಸುತ್ತಾರೆ. ಆದ್ದರಿಂದಲೇ ಅವರು ಅದನ್ನು ಮಾರಿ ಹಾಕಲು ಸಿದ್ಧರಿರುತ್ತಾರೆ. ಆದರೆ ಹೆಂಗಸರು ತಮ್ಮ ನೆಲದ ಬಗ್ಗೆ ಭಾವನಾತ್ಮಕ ಸಂಬಂಧ ಬೆಳೆಸಿಕೊಂಡಿರುತ್ತಾರೆ. ಆದ್ದರಿಂದ ಪುರುಷರಂತೆ ಅವರು ಬೇಗ ನೆಲವನ್ನು ಮಾರಿ ಹಾಕುವುದಿಲ್ಲ. ಈಗಾಗಲೇ ಹರಿಯಾಣ, ಮಹಾರಾಷ್ಟ್ರಗಳಲ್ಲಿ ಆರಂಭವಾಗಿರುವ ಭೂ ಮಾರಾಟವನ್ನು ಬಿಹಾರದಲ್ಲಾದರೂ ತಡೆಯಲು ಸಾಧ್ಯವಾಗಬಹುದೆಂಬುದು ಈ ಚಳುವಳಿಯ ಆಶಯಕೂಡ.

ಒಂದು ಪಾದಯಾತ್ರೆಯಿಂದ ದಲಿತ ಹೆಂಗಸರ ಈ ಸಮಸ್ಯೆ ಬಗೆ ಹರಿಯುವುದಿಲ್ಲವೆಂಬುದು ನಿಜವಾದರೂ ಈ ಜನರ ಸಮಸ್ಯೆಯನ್ನು ಈ ನೆಲೆಯಿಂದ ನೋಡಿ ಹೋರಾಡುವತ್ತ ಈ ಪಾದಯಾತ್ರೆ ದಿಕ್ಸೂಚಿಯಾಗಬಲ್ಲುದು.

★ ★ ★

# ಶಿಕ್ಷಣ ಮತ್ತು ಲಿಂಗತಾರತಮ್ಯ

ಹೆಣ್ಣು ಮಕ್ಕಳಿಗೆ ಉಚಿತ ಶಿಕ್ಷಣ ಎಂದಾಗ ಒಂದು ಕಡೆಯಿಂದ ಸಂತೋಷವಾಗುತ್ತದೆ. ಮತ್ತೊಂದು ಕಡೆಯಿಂದ ಈ ಉಚಿತ ಶಿಕ್ಷಣ ಬರಬೇಕಾದರೆ, ಅದು ಏನನ್ನು ಸೂಚಿಸುತ್ತದೆ ಎಂಬುದನ್ನು ಯೋಚಿಸಿದರೆ ಚಿಂತೆಯಾಗುತ್ತದೆ. ಹೆಣ್ಣು ಮಕ್ಕಳ ಶಿಕ್ಷಣ ಇನ್ನೂ ಅಷ್ಟರ ಮಟ್ಟಿಗೆ ಹಿಂದುಳಿದಿದೆಯಲ್ಲವೇ ಎಂಬುದು ನೆನಪಾಗುತ್ತದೆ. ಹೆಣ್ಣು ಮಕ್ಕಳ ಕೈಗೆ ಇನ್ನೂ ಶಿಕ್ಷಣ ದಕ್ಕಿಲ್ಲ ಎಂಬುದು ಸ್ಪಷ್ಟವಾಗುತ್ತದೆ. ಮಹಿಳೆಯರು ಶಿಕ್ಷಣದಿಂದ ವಂಚಿತರಾಗಿರುವುದು, ತಾರತಮ್ಯದ ಒಂದು ದೊಡ್ಡ ಗುರುತು.

ಅಧ್ಯಯನ ಒಂದರ ಸಂದರ್ಭದಲ್ಲಿ, ಹೆಣ್ಣು ಮಕ್ಕಳಿಗೆ ಎಷ್ಟು ಶಿಕ್ಷಣ ಕೊಡುತ್ತೀರಿ, ಗಂಡು ಮಕ್ಕಳಿಗೆ ಎಷ್ಟು ಶಿಕ್ಷಣ ಕೊಡುತ್ತೀರಿ ಎಂಬ ಪ್ರಶ್ನೆ ಇತ್ತು. ಶಿಕ್ಷಣದ ಅಗತ್ಯವನ್ನಂತೂ ಜನ ಮನಗಂಡಿರುವುದು ಅವರ ಉತ್ತರದಿಂದ ಸ್ಪಷ್ಟವಾಗಿತ್ತು. ಹೆಚ್ಚು ಮಂದಿ, ಗಂಡು ಮಕ್ಕಳ ಮಟ್ಟಿಗೆ ಅವರಿಗೆ ಎಷ್ಟು ಶಿಕ್ಷಣ ಬೇಕೋ ಅಷ್ಟು ಕೊಡಬೇಕು ಎಂದರು. ಆದರೆ ಹೆಣ್ಣು ಮಕ್ಕಳಿಗೆ ಎಷ್ಟು ಬೇಕೋ ಅಷ್ಟು ಎಂಬ ಉತ್ತರ ಅಷ್ಟೊಂದು ಜನರಿಂದ ಬಂದಿರಲಿಲ್ಲ. ಯಾರಿಗೆ ಶಿಕ್ಷಣ ಅಗತ್ಯ ಹೆಚ್ಚು ಎಂದು ಕೇಳಿದರೆ, ಇಂದಿನ ದಿನಗಳಲ್ಲೂ 'ಗಂಡು ಮಕ್ಕಳಿಗೆ' ಎಂದು ಹೇಳುವುದು ಕೇಳಿಬರುತ್ತದೆ.

ಹೆಣ್ಣು ಮಗುವಿಗೆ ಶಿಕ್ಷಣ ಯಾಕೆ ಬೇಕು, ಎಂದು ಕೇಳಿದರೆ ''ಒಳ್ಳೆಯ ಹುಡುಗ ಸಿಗಬೇಕಾದರೆ, ಈಗ ಮದುವೆಯಾಗುವಾಗ, ಹುಡುಗಿ ಎಷ್ಟು ಓದಿದ್ದಾಳೆ'' ಎಂದು ಕೇಳುತ್ತಾರೆ ಎಂದು ಅನೇಕರು ಮಾತಾಡುತ್ತಾರೆ. ಆಮೇಲೆ ಕ್ರಮೇಣ ಲೋಕಜ್ಞಾನ ಪಡೆಯಲು, ತಮ್ಮ ಕಾಲ ಮೇಲೆ ನಿಲ್ಲಲು ಎಂದು ಹೇಳುತ್ತಾರೆ. ಆದರೆ ಮದುವೆಯ ವಿಚಾರವೂ ತಪ್ಪದೇ ಬರುತ್ತದೆ. ಎಲ್ಲಾದರೂ ಯಾವತ್ತಾದರೂ ಗಂಡು ಮಕ್ಕಳಿಗೆ ಶಿಕ್ಷಣ ಯಾಕೆ ಬೇಕು ಅಂದರೆ ಇಂತಹ ಉತ್ತರವಿದ್ದೀತೇ! ಅಂದರೆ ಇದರ ಅರ್ಥ ಆಕೆಯ ಶಿಕ್ಷಣವೂ ಆಕೆಯ ವ್ಯಕ್ತಿತ್ವಕ್ಕಾಗಿ ಅಲ್ಲ ಎಂಬುದು.

ಇದಲ್ಲಾ ಕಟ್ಟು ಕಥೆಗಳಲ್ಲ. ಅಧ್ಯಯನದ ಸಂದರ್ಭದಲ್ಲಿ ಎದ್ದು ಕಾಣುವಂತಹವು. ಹೆಣ್ಣು ಮಕ್ಕಳ ಶಿಕ್ಷಣದ ಬಗ್ಗೆ ಇಂತಹ ಧೋರಣೆಗಳು ಇರುವಾಗ, ತಾರತಮ್ಯದ ಹತ್ತು - ಹಲವು ಅನುಭವಗಳು ಸಮಾಜದಲ್ಲಿ ಜೀವಂತವಾಗಿರುವಾಗ, ಬೇರೆ ನೆಲೆಯಲ್ಲಿ ಕೆಲಸಗಳಾಗಬೇಕಾಗುತ್ತವೆ. ಈ ಹಿನ್ನೆಲೆಯಲ್ಲಿ ''ಶಾಲೆ''ಗಳಲ್ಲಿ ಈ ತಾರತಮ್ಯದ ಧೋರಣೆ ಹೋಗಲಾಡಿಸುವ ನಿಟ್ಟಿನಲ್ಲಿ ಎಂತಹ ಕೆಲಸ ನಡೆಯಬೇಕಾಗುತ್ತದೆ ಎಂದು ಯೋಚಿಸಬೇಕಾಗುತ್ತದೆ.

ಶಾಲೆಗಳಲ್ಲಿ ಈ ಬಗ್ಗೆ ಬಹಳ ಕೆಲಸಗಳು ನಡೆಯುತ್ತಾ ಬಂದಿವೆ. ಸ್ವಯಂ ಸೇವಾ ಸಂಸ್ಥೆಗಳು ನಡೆಸುವ ಶಾಲೆಗಳಲ್ಲಂತೂ ನೇರ ಹೆಣ್ಣು ಮಕ್ಕಳ ಸಶಕ್ತತೆಗೆ ಸಂಬಂಧಿಸಿದ ಕೆಲಸಗಳು ನಡೆಯುತ್ತಿವೆ, ಪಠ್ಯ ಪುಸ್ತಕಗಳಲ್ಲೂ ಬದಲಾವಣೆಗಳು ಬರುತ್ತಿವೆ. ''ಕಮಲ ಅಮ್ಮನಿಗೆ ಅಡುಗೆ ಮನೆಯಲ್ಲಿ ಸಹಕರಿಸಿದಳು. ಬಸವ ತಂದೆಗೆ ತೋಟದಲ್ಲಿ ಸಹಕರಿಸಿದ'' ಎಂಬಂತಹ ನೇರವಾಗಿ ಲಿಂಗಾಧಾರಿತ ಶ್ರಮ ವಿಭಜನೆಗಳ ಉಲ್ಲೇಖಗಳು ಕಡಿಮೆಯಾಗಿವೆ.

ಕೆಲವೊಂದು ಪ್ರದೇಶಗಳಲ್ಲಿ ಶಾಲೆಗಳಲ್ಲಿ ಹೆಣ್ಣು ಮಕ್ಕಳ ಸಮಾನ ಭಾಗವಹಿಸುವಿಕೆಗಾಗಿ, ಅವಕಾಶಕ್ಕಾಗಿ ಕೆಲವೊಂದು ಅಂಶಗಳನ್ನು ಮುಂದಿಟ್ಟುಕೊಂಡು ಕೆಲಸ ಮಾಡಿದ್ದಾರೆ. ನಾಯಕತ್ವವನ್ನು ಹೆಣ್ಣು ಮಕ್ಕಳಿಗೆ ಕೊಡುವುದು, ಸಭೆ ಸಮಾರಂಭಗಳಲ್ಲಿ ಮುಂದೆ ನಿಲ್ಲುವ ಅವಕಾಶ, ವ್ಯವಸ್ಥೆಗಳು, ಶಾಲೆಯ ಪ್ರತಿಯೊಂದು ಚಟುವಟಿಕೆಯಲ್ಲೂ ಸಮಾನ ಅವಕಾಶ ನೀಡುವುದು ಇತ್ಯಾದಿ.

ಶಾಲೆಯ ಒಳಗಿನ ಅನುಭವಗಳು ಹೆಣ್ಣು ಮಕ್ಕಳಿಗೆ ಮತ್ತೆ ತಾರತಮ್ಯವನ್ನು ಗಟ್ಟಿಮಾಡುವಂತಹ ನೆಲೆಯಲ್ಲಿರದೆ ಸಶಕ್ತ ಭಾವ ಬೆಳೆಯಲು ಸಹಕರಿಸುವಂತಾಗಬೇಕು. ಗಂಡು ಮಕ್ಕಳು, ಹೆಣ್ಣು ಮಕ್ಕಳ ಶಕ್ತಿ ಸಾಮರ್ಥ್ಯಗಳನ್ನು ಅರ್ಥಮಾಡಿಕೊಳ್ಳುವ ನೆಲೆಯಲ್ಲಿ ವಾತಾವರಣವಿರಬೇಕು. ಈ ವಾತಾವರಣ ಬರಿಯ ಪಠ್ಯ, ತರಗತಿಯ ಅವಧಿಗೆ ಸೀಮಿತವಾಗಿರುವುದಿಲ್ಲ. ಬೇರೆ ಬೇರೆ ಸ್ವರೂಪದಲ್ಲಿ ಹೊರಬರುತ್ತದೆ.

ಇತ್ತೀಚೆಗೆ ಲಿಂಗತಾರತಮ್ಯಕ್ಕೆ ಸಂಬಂಧಿಸಿದ ಅಧ್ಯಯನ ಒಂದರಲ್ಲಿ, ಹುಡುಗರ ಗುಂಪಿನೊಂದಿಗೆ ಚರ್ಚೆ ಮಾಡಬೇಕಿತ್ತು. ಗಂಡು-ಹೆಣ್ಣು ಮಕ್ಕಳ ಬುದ್ಧಿವಂತಿಕೆಗೆ ಸಂಬಂಧಿಸಿ ಪ್ರಶ್ನೆ ಇತ್ತು. ಹುಡುಗರೆಲ್ಲಾ ಯಾವುದೇ ಮುಲಾಜಿಲ್ಲದೆ ಗಂಡು ಮಕ್ಕಳೇ ಬುದ್ಧಿವಂತರು, ಹೆಣ್ಣು ಮಕ್ಕಳು ಬುದ್ಧಿವಂತರಲ್ಲ, ಅಂಜುಬುರುಕರು ಎಂದು.

ಹೇಳತೊಡಗಿದರು. ಒಂದಿಬ್ಬರು ಗಂಡು ಮಕ್ಕಳು ಮಾತ್ರ ಇಲ್ಲ. ಹೆಣ್ಣು-ಗಂಡು ಇಬ್ಬರೂ ಬುದ್ಧಿವಂತರು ಎಂದರು.

ಮತ್ತೊಂದು ಸಂದರ್ಭದಲ್ಲಿ, ತರಗತಿಯ ಅಲಂಕಾರ ಮಾಡಬೇಕಿತ್ತು. ಮಕ್ಕಳು ಸ್ವಂತ ಉತ್ಸಾಹದಲ್ಲಿ ಹೊರಟಿದ್ದರು. ಟೀಚರ್‌ನ ನೇರ ಭಾಗವಹಿಸುವಿಕೆ ಇರಲಿಲ್ಲ. ಹತ್ತುವುದು, ಕಟ್ಟುವುದು ಕೆಲಸ ಹೆಣ್ಣು ಮಕ್ಕಳಿಗೆ ಆಗುವುದಿಲ್ಲವೆಂದು ಗಂಡು ಮಕ್ಕಳು ತಾವೇ ನಿರ್ಧರಿಸಿ ಎಲ್ಲಾ ಕೆಲಸ ತಾವೇ ಮಾಡಿದರು. ಹೆಣ್ಣು ಮಕ್ಕಳಿಗೆ ಬಹಳ ಬೇಸರವಾಗಿತ್ತು.

ಮನೆಯಲ್ಲಿ, ಮನೆಕೆಲಸವೇನಾದರೂ ಹೇಳಿದರೆ ಚಿಕ್ಕ ವಯಸ್ಸಿನ ಗಂಡು ಮಕ್ಕಳೂ ಕೂಡಾ - ''ಅದು ಹೆಂಗಸರ ಕೆಲಸ. ನಾವು ಯಾಕೆ ಮಾಡಬೇಕು'' ಎನ್ನುವುದು ಕೇಳಿ ಬರುತ್ತದೆ. ಅದಕ್ಕಾಗಿ ಶಾಲೆಗಳಲ್ಲಿ ಹೆಣ್ಣು ಮಕ್ಕಳಲ್ಲಿ ಧೈರ್ಯ, ಸಾಹಸಕ್ಕೆ ಅವಕಾಶ ಕೊಡುವುದರ ಜತೆಗೆ ಗಂಡು ಮಕ್ಕಳೂ ಕೂಡಾ ಈ ನಿಟ್ಟಿನಲ್ಲಿ ಸಂವೇದಿಗಳಾಗುವಂತೆ ಗಮನ ಕೊಡಲೇ ಬೇಕಾಗುತ್ತದೆ.

ಶಾಲೆಯ ದಿನಗಳ ಅನುಭವಗಳೊಂದಿಗೆ ಹೆಣ್ಣುಮಕ್ಕಳು ಅಧೀನತೆಯ ಗುಣಗಳನ್ನು ಬೆಳೆಸಿಕೊಳ್ಳದೆ, ಸಶಕ್ತತೆಯ ಭಾವ ಬೆಳೆಸಿಕೊಳ್ಳುವ ರೀತಿಯಲ್ಲಿ ಶಿಕ್ಷಣ ನೀಡುವ ಅಗತ್ಯವಿದೆ. ಯಾವ ಯಾವ ಅಂಶಗಳು ಹೆಣ್ಣು ಮಕ್ಕಳಲ್ಲಿ ಅಧೀನತೆ ಬೆಳೆಸುತ್ತವೆಯೋ ಅವನ್ನು ಗುರುತಿಸಿ ಅವುಗಳತ್ತ ಕೆಲಸ ಮಾಡಬೇಕಾಗುತ್ತದೆ. ಅತ್ಯಂತ ಚಿಕ್ಕ ಚಿಕ್ಕ ಅನುಭವಗಳಿಂದಲೇ ತಾರತಮ್ಯ ಬೆಳೆಯುತ್ತದೆ, ಗಾಢವಾಗುತ್ತದೆ. ಎಂಬುದನ್ನು ನೆನಪಿಟ್ಟು ಕೊಳ್ಳಬೇಕಾಗುತ್ತದೆ.

ತರಗತಿಯಲ್ಲಿ ಟೀಚರು ಯಾರ ಕಡೆಗೆ ಹೆಚ್ಚು ಗಮನ ಕೊಡುತ್ತಿದ್ದಾರೆ ಎಂಬುದು ಕೂಡಾ ಒಂದು ಸಂದೇಶ ಕೊಡುತ್ತದೆ. ಟೀಚರು ಹುಡುಗರು ಕಡೆಗೇ ಹೆಚ್ಚು ಗಮನ ಕೊಡುತ್ತಿದ್ದರೆ, ಹುಡುಗಿಯರು ತಮಗೆ ಸಂಬಂಧಿಸಿಲ್ಲವೆಂಬಂತೆ ನಿರಾಸಕ್ತಿ ತಾಳಿದ್ದು ಇದೆ. ಒಬ್ಬರು ಟೀಚರು, ಮರುದಿನ ಮಾಡುವ ಪ್ರಯೋಗದ ಬಗ್ಗೆ ಹುಡುಗರತ್ತ ವಿವರಿಸುತ್ತಿದ್ದರು. ಏನೋ ಗೆರಟೆಯಲ್ಲಿ ಮಣ್ಣು, ಬೀಜ ಹಾಕಿಕೊಂಡು ತರಬೇಕಾಗಿತ್ತು. ಹುಡುಗಿಯರು ಇಣಿಕಿ ಇಣಿಕಿ ನೋಡಿ ''ಏನು ಟೀಚರ್'' ಎಂದರು ಕೂಡಾ ''ಅವರಿಗೆ ಹೇಳಿದ್ದೇನೆ ಸುಮ್ಮನಿರಿ'' ಎಂದರು.

ಇಂತಹ ಮುಖ್ಯ ಅಂಶಗಳನ್ನು ಹುಡುಗರನ್ನು ಉದ್ದೇಶಿಸಿ, ಅದರಲ್ಲೂ ಬುದ್ಧಿವಂತರೆನಿಸಿಕೊಂಡ ಹುಡುಗರನ್ನು ಉದ್ದೇಶಿಸಿಯೇ ಮಾತನಾಡುವುದು ಅವರಿಗೆ ಅಭ್ಯಾಸವಾಗಿತ್ತು. ಅವರು ಇದನ್ನು ಕೆಟ್ಟ ಉದ್ದೇಶದಿಂದ ಮಾಡುತ್ತಿರಲಿಲ್ಲ. ಸಹಜವಾಗಿಯೇ ಹುಡುಗರಿಗೆ ಪ್ರಾಶಸ್ತ್ಯ ಕೊಡುವುದು ಅವರಿಗೆ ಅಭ್ಯಾಸವಾಗಿತ್ತು. ಅವರ ಬಳಿ ಮುಕ್ತವಾಗಿ ಮಾತಾಡಿದಾಗಲೇ ಅವರಿಗೂ ಈ ವಿಷಯ ಗಮನಕ್ಕೆ ಬಂದಿದ್ದು.

ಅಂತೆಯೇ ಶಾಲೆಯಿಂದ ಮನೆಗೆ ಏನಾದರೂ ಸಂದೇಶ ಕೊಡುವ ಸಂದರ್ಭದಲ್ಲಿ, ಸರ್ಟಿಫಿಕೇಟ್‌ಗೆ ಸಹಿ ಬೇಕಾದಲ್ಲಿ, ಮನೆಯ ''ಯಜಮಾನ'' (ಹೆಚ್ಚಾಗಿಯೂ ನೂರರಲ್ಲಿ ತೊಂಬತ್ತು ಪಾಲು ಕೂಡಾ ಗಂಡಸರು)ರ ಹೆಸರಿಗೆ ಹೋಗುತ್ತದೆ. ಮಕ್ಕಳು ಸಹಜವಾಗಿಯೇ ಮನೆಯಲ್ಲಿ ಹಿರಿತನ-ಹೆಚ್ಚಿನ ಮಹತ್ವ ಗಂಡಸರಿಗೇ ಹೋಗುವುದನ್ನು ಗುರುತಿಸುತ್ತಾರೆ. ಇವೆಲ್ಲವೂ ಮಹಿಳೆಯರ ಸ್ಥಾನಮಾನವನ್ನು ನಿರ್ಧರಿಸುವಲ್ಲಿ, ಅನುಭವಗಳನ್ನು ಗಟ್ಟಿ ಮಾಡುವಲ್ಲಿ ಸಹಕರಿಸುತ್ತವೆ.

ಇಂತಹ ನೂರಾರು ಚಿಕ್ಕ ಅನುಭವಗಳೇ ವಿಶಾಲ ವ್ಯಾಪ್ತಿಯ ತಾರತಮ್ಯವನ್ನು ಉಳಿಸುವಲ್ಲಿ ಬೆಳೆಸುವಲ್ಲಿ ದೊಡ್ಡ ಪಾತ್ರವಹಿಸುತ್ತವೆ. ಅದಕ್ಕಾಗಿ ನಮ್ಮ ಗಮನವಿರಬೇಕಾದದ್ದು:

ಈ ದಿನಗಳಲ್ಲಿ, ಹೆಣ್ಣು ಮಕ್ಕಳನ್ನು ಬೆಳೆಸುವತ್ತ ಬಹಳ ಗಂಭೀರವಾಗಿ ಕೆಲಸ ನಡೆಯಬೇಕಾಗಿದೆ. ಅನ್ಯಾಯವನ್ನು ಸಹಿಸಿಕೊಳ್ಳಬೇಕಾಗಿಲ್ಲವೆಂಬುದನ್ನು ಹೆಣ್ಣು ಮಕ್ಕಳು ಶಾಲಾದಿನಗಳಲ್ಲೇ ಅರ್ಥ ಮಾಡಿಕೊಂಡರೆ, ಗಂಡನ ಮನೆಯಲ್ಲಿ, ಕೆಲಸ ಕ್ಷೇತ್ರಗಳಲ್ಲಿ ನಡೆಯುವ ಎಷ್ಟೋ ದೌರ್ಜನ್ಯಗಳನ್ನು ಎದುರಿಸಬಹುದೇನೋ!

ಮತ್ತೆ ಮತ್ತೆ ನೆನಪಿಟ್ಟುಕೊಳ್ಳಬೇಕಾದದ್ದು ಗಂಡು ಹೆಣ್ಣು ಮಕ್ಕಳಿಬ್ಬರಲ್ಲೂ ಲಿಂಗ ಸಂವೇದಿ ಮನೋಭಾವ ಬೆಳೆಯಬೇಕಾಗುತ್ತದೆ. ಪರಸ್ಪರ ಮಾನ್ಯತೆ - ಗೌರವ ಕೊಡುವ ಧೋರಣೆ, ಸಂಬಂಧ ಬೆಳೆಸುವಂತಹ ವಾತಾವರಣ, ಶಿಕ್ಷಣ ಸಿಗಬೇಕಾಗುತ್ತದೆ.

- ವಿ. ಪಿ.

**ಕೃಪೆ : ಶಿಕ್ಷಕ ಸಂಗಾತಿ**

★ ★ ★

# ದೀಪಾವಳಿಯು ದೀಪ
# ಆಗಲಿ ನಂದಾದೀಪ

ಸಾಲು ಸಾಲು ಹಣತೆಗಳ ದೀಪಹೊತ್ತು
ಮತ್ತೆ ಬಂತು ದೀಪಾವಳಿ
ಕಣ್ಗಳ ಕತ್ತಲೆಯ ಕಳೆದು
ಮನಕೆ ಚೇತನವ ತಂದು
ನಮ್ಮೆಲ್ಲರ ಬಾಳದಾರಿಗೆ ಬೆಳಕು ಚೆಲ್ಲುವ

ಹೊಸ ಭರವಸೆಯ ಮೂಡಿಸಿದೆ
ಮೊಗದಲಿ ನಸುನಗುವ ಚಿಮ್ಮಿಸಿದೆ

ಅಶ್ವಯುಜ ಚತುರ್ದಶಿಯಿಂದ ಕಾರ್ತಿಕ ಮಾಸದ ಪಾಡ್ಯದವರೆಗೆ
3 ದಿನಗಳ ಕಾಲ ಸಡಗರ, ಸಂಭ್ರಮದಿಂದ ಆಚರಿಸುವ ಹಬ್ಬ
ದೀಪಾವಳಿ.

ಅಬಾಲವೃದ್ಧರಾದಿಯಾಗಿ ಜಾತಿಮತ, ಭೇದಭಾವ ಮರೆತು ಎಲ್ಲರೂ
ಒಂದಾಗಿ ಬೆರೆತು ಸಂತಸಪಡುವ ಶುಭ ಸಂದರ್ಭ.

ದೀಪಗಳ ಈ ಹಬ್ಬ ದುಷ್ಟಶಕ್ತಿಯನ್ನು ದಮನಮಾಡಿ ಶಿಷ್ಟ ರಕ್ಷಣೆ
ಮಾಡಿ ಸಲಹುವ ಸಂಕೇತ, ಅಜ್ಞಾನವೆಂಬ ಅಂಧಕಾರ ಕಳೆದು
ಸುಜ್ಞಾನವೆಂಬ ಜ್ಯೋತಿ ಬೆಳಗುವ ದೀಪಾವಳಿ ಮಂಗಳದಾಯಿನಿ.
ನಮ್ಮೆಲ್ಲರ ಬಾಳಿಗೆ ವರದಾಯಿನಿಯಾಗಿರುವ ಪ್ರಕೃತಿ ಮಾತೆಯ ಕರುಣೆ
ನಮ್ಮ ಮೇಲೆ ಇರಲಿ. ನಮ್ಮೆಲ್ಲರನ್ನೂ ಸದಾ ಸಲಹಲಿ.

**ಹೊಮ್ಮಲಿ ಜ್ಞಾನದೀವಿಗೆ ಕಿರಣ**
**ಎಲ್ಲರ ಬಾಳಲೂ ಆಶಾಕಿರಣ**

*– ಕರ್ನಾಟಕ ವಾರ್ತೆ*

# ಸ್ತ್ರೀ ದೇವತೆಗಳಿಗೆ ಗಂಡಿನ ಬಲಿ

ಫಲವಂತಿಕೆ ಮತ್ತು ಸಮೃದ್ಧಿಯನ್ನು ಕೇಂದ್ರ ಆಶಯವಾಗುಳ್ಳ ಅನೇಕ ಆಚರಣೆಗಳು ಜಗತ್ತಿನ ಪ್ರಾಚೀನ ಸಂಸ್ಕೃತಿಗಳಾದ ಈಜಿಪ್ಟ್, ಮೆಸಪಟೋಮಿಯ, ಸುಮೆರ್, ಗ್ರೀಸ್, ಪಾಲೇಸ್ತೈನ್, ಚೈನಾ ಭೂ ಭಾಗಗಳಲ್ಲಿ ಪ್ರಚಲಿತವಾಗಿದ್ದವು. ಪ್ರಕೃತಿಯನ್ನು ಈ ಸಂಸ್ಕೃತಿಗಳು ಪ್ರಾರಂಭದಿಂದಲೂ ಮಹಾಮಾತೃ ದೇವತೆಗಳಾಗಿ ಸ್ವೀಕರಿಸಿದ್ದವು. ಈಕೆಯನ್ನು ಸಂತೃಪ್ತಗೊಳಿಸಲು ಗಂಡುಗಳನ್ನು ಮಂತ್ರಾಚರಣೆಯಲ್ಲಿ ಗಂಡಿನ ಬಲಿಯಾಗಿ ಅರ್ಪಿಸುತ್ತಿದ್ದರು. ಇಟಲಿಯ ಅರೇಸೀಯ ಪಟ್ಟಣದಲ್ಲಿ ಆಚರಣೆಯಲ್ಲಿದ್ದ ಗಂಡಿನ ಬಲಿ (ಆಹುತಿ)ಯ ಪದ್ಧತಿಯನ್ನು ಫೇಜರ್ ತಮ್ಮ ಕೃತಿಯಲ್ಲಿ ಪ್ರಸ್ತಾಪಿಸಿದ್ದಾರೆ. ನಿಸರ್ಗ ದೇವತೆಯಾದ ಡಯಾನ ಎಂಬ ಮಾತೃದೇವತೆಯು ಇದ್ದು, ಈಕೆಯ ಪೂಜಾರಿ ಮಾತ್ರ ಗಂಡಸು. ಪೂಜಾರಿಯನ್ನು ಆಯ್ಕೆ ಮಾಡುವ ಆಚರಣೆಯು ನರಬಲಿ (ಗಂಡಿನಬಲಿ)ಯ ಆಚರಣೆಯೇ ಆಗಿದೆ. ಡಯಾನ ದೇವತೆಯ ಪೂಜಾರಿ ಆಗಲು ಬಯಸುವ ವ್ಯಕ್ತಿಯು, ಹಿಂದಿನ ಪೂಜಾರಿಯನ್ನು ಮರದ ಕೊಂಬೆಯಿಂದ ಬಡಿದು ಕೊಲ್ಲಬೇಕಾಗಿತ್ತಂತೆ ಮತ್ತು ಹೀಗೆ ಕೊಲ್ಲುವ ಆಚರಣೆಯ ಉದ್ದೇಶವನ್ನು ಫ್ರೇಜರ್ ಅವರು ಹೀಗೆ ವಿವರಿಸಿದ್ದಾರೆ. 'ಡಯಾನ ದೇವತೆ, ಪ್ರಾಣಿ ಮತ್ತು ಸಸ್ಯವರ್ಗದ ಆದಿದೇವತೆ ಈ ದೇವತೆಯ ಜೊತೆಗಾರನಾದ ವರ್ಜೀಸಿಯಸ್ ದೇವರ ಪ್ರತಿನಿಧಿಯಂತೆ ವರ್ತಿಸಬೇಕಾಗಿದ್ದ ಪಾದ್ರಿಗೆ ಕಾಡಿನ ರಾಜ ಎಂಬ ಬಿರುದೂ ಇತ್ತು. ಪ್ರಾಣಿ ವರ್ಗ ಮತ್ತು ಸಸ್ಯವರ್ಗವು ಸಮೃದ್ಧವಾಗಬೇಕಾದರೆ, ಅದಕ್ಕೆ ಬಹುಮಟ್ಟಿಗೆ ಕಾರಣವಾಗುತ್ತಿದ್ದ ಪಾದ್ರಿಯನ್ನು ದೇವತೆಗೆ ಬಲಿ ಕೊಡಲೇ ಬೇಕಾಗಿತ್ತು.'

ಭಾರತದಲ್ಲಿ ಬಿಹಾರ, ಒರಿಸ್ಸಾ-ಬೆಂಗಾಲ್‌ಗಳಲ್ಲಿ, ನಡೆಯುತ್ತಿದ್ದ ಪ್ರಕೃತಿಗೆ ಬಲಿ ನೀಡುವ ಆಚರಣೆಯನ್ನು ಫ್ರೇಜರ್ ದಾಖಲಿಸಿದ್ದಾರೆ. ಈ ರಾಜ್ಯಗಳಲ್ಲಿ ಕೊಂಡಾಸ್ ಎಂಬ ಜನಾಂಗವಿದ್ದು ಇವರು ಡ್ರಾವಿಡ ಪ್ರ - ಅಸ್ಟ್ರೊಲಯ್ಡ ಜನಾಂಗಕ್ಕೆ ಸೇರಿದವರು. ಈ ಜನಾಂಗದಲ್ಲಿ ನರಬಲಿಗೆ ಅಂತಲೇ ಒಂದು ಪಂಗಡವನ್ನು (ಕುಟುಂಬ) ನೇಮಿಸಲಾಗಿತ್ತು. ಇವರನ್ನು (ಬಲಿಪಶು) ಮೆರಿಯಾ (Meriah) ಎಂದು ಗುರುತಿಸಲಾಗಿತ್ತು. ಪ್ರತಿ ವರ್ಷವೂ ನಡೆಯುತ್ತಿದ್ದ ನರಬಲಿಯ ಆಚರಣೆಯೂ ಅತ್ಯಂತ ಬೀಭತ್ಸವಾಗಿತ್ತು. ಬಲಿಯಾಗುವ ವ್ಯಕ್ತಿಯನ್ನು ವೃಕ್ಷವೊಂದಕ್ಕೆ ಕಟ್ಟಿ ಚೂಪಾದ ಕೋಲುಗಳಿಂದ ಆತನ ದೇಹವನ್ನು ಆಚರಣೆಯಲ್ಲಿ ಭಾಗವಹಿಸುತ್ತಿರುವ ಎಲ್ಲರೂ ಇರಿಯಬೇಕಾಗಿತ್ತು. ಈ ಆಚರಣೆಗೆ ಬೇರೆ ಬೇರೆ ಊರುಗಳಿಂದ ಜನ ಬರುತ್ತಿದ್ದರು. ಬಲಿಯಾದವನ ತಲೆ ಮತ್ತು ಮೂಳೆಗಳನ್ನು ಹೊರತು ಪಡಿಸಿ ಅವನು ಇನ್ನೂ ಜೀವಂತವಾಗಿದ್ದಾಗಲೇ ಅವನ ಮೈಯಿಂದ ಕೈಗೆ ಸಿಗುವಷ್ಟು ಮಾಂಸವನ್ನು ಕಿತ್ತುಕೊಳ್ಳುತ್ತಿದ್ದರು ಮತ್ತು ಆ ಮಾಂಸವನ್ನು ವಿಡುತ್ತಾ ತಮ್ಮ ಗ್ರಾಮಗಳಿಗೆ ತರುತ್ತಿದ್ದರು. ಅಲ್ಲಿ ಪೂಜಾರಿ ಅದನ್ನು ಎರಡು ಭಾಗ ಮಾಡಿ ಒಂದು ತುಣುಕನ್ನು ಊರಿನ ಮಧ್ಯೆ ಆಗಲೇ ಸಿದ್ಧಪಡಿಸಿದ್ದ ಗುಳಿಯಲ್ಲಿ ಹೂತಿಡುತ್ತಿದ್ದ ಮತ್ತು ಇನ್ನರ್ಧ ಮಾಂಸದ ತುಣುಕಿನಲ್ಲಿ ಊರಿನಲ್ಲಿರುವ ಮನೆಗಳಿಗೊಂದರಂತೆ ತುಂಡು ಮಾಡಿ ಹಂಚುತ್ತಿದ್ದ. ಈ ಪವಿತ್ರ ಮಾಂಸದ ತುಂಡನ್ನು ಆ ಮನೆಗಳ ಯಜಮಾನರು ತಮ್ಮ ಹೊಲಗಳಿಗೆ ತೆಗೆದುಕೊಂಡು ಹೋಗಿ ಹೂಳಿ ಬರುತ್ತಿದ್ದರು. ಈ ಆಚರಣೆಯಿಂದ ಭೂಮಿಯ ಫಲವಂತಿಕೆ ವೃದ್ಧಿಸುವುದೆಂದು ಅವರು ಭಾವಿಸಿದ್ದರು. ''ಉಗಾಂಡದಲ್ಲಿ ಮಳೆಯ ಆಚರಣೆಯ ಸಂದರ್ಭದಲ್ಲಿ ಮಾಂತ್ರಿಕನನ್ನು ಬಲಿ ಕೊಡುವ ಪದ್ಧತಿ ಇತ್ತು. ಈಜಿಪ್ಟ್‌ನಲ್ಲಿ ನೈಲ್ ನದಿಗೆ, ಬೆಬಿಲೋನಿಯಾದ ಟೈಗ್ರಿಸ್, ಯುಪ್ರರಟಿಸ್, ನದಿಗಳಿಗೆ ಪ್ರತಿವರ್ಷವೂ ಬಲಿ ಕೊಡುವ ಆಚರಣೆ ರೂಢಿಯಲ್ಲಿತ್ತು. ಅಲ್ಲಿ ಕುಟುಂಬದ ವಾರಸುದಾರನಾದ ಗಂಡಿಗೆ ಬದಲಿ ಬಲಿಪಶುಗಳಾಗಿ ಎತ್ತು, ಕುದುರೆಗಳನ್ನು ನದಿಗೆ ಆಚರಣೆಯ ಮುಖ್ಯ ಕ್ರಿಯೆಯಾಗಿ ಎಸೆಯುತ್ತಿದ್ದರು. ಬಹುಶಃ ಆರಂಭದಲ್ಲಿ ಈ ಆಚರಣೆಗಳು ಪ್ರಕೃತಿಗೆ ಗಂಡನ್ನು ಬಲಿಕೊಡುವ ಪದ್ಧತಿಗಳೇ ಆಗಿದ್ದು ಗಂಡಿನ ಪ್ರಾಮುಖ್ಯತೆ ಬೆಳೆದಂತೆ ಬದಲಿಗಳಾದ ಎತ್ತು, ಕುದುರೆಗಳಿಗೆ ಪರಿವರ್ತನೆಗೊಂಡಿರಬೇಕು. ಕಾಲಾಂತರದಲ್ಲಿ ಈ ಆಚರಣೆಗಳು ಹೆಣ್ಣು ಬಲಿಯಾಗಿ ಕಾಣಿಸಿಕೊಂಡಿರುವುದನ್ನು ಗಮನಿಸಬಹುದು. ಈ ಬದಲಿ ಬಲಿಗಳ ಹಿಂದೆ ಕ್ರಿಯಾಶಾಲಿಯಾಗಿರುವ ಕಾರಣಗಳು ಸ್ಪಷ್ಟವಾಗಿಯೇ ಇವೆ. ಈ ಸಂಸ್ಕೃತಿಯಲ್ಲಿ ಪ್ರಾರಂಭದಲ್ಲಿ ನದಿ ದೇವತೆಗಳನ್ನು ಹೆಣ್ಣಿನ ರೂಪದಲ್ಲಿ ಕಲ್ಪಿಸಿಕೊಳ್ಳಲಾಗಿತ್ತು. ಆದರೆ ಗಂಡಿನ ಯಾಜಮಾನ್ಯ ಪ್ರಬಲಗೊಂಡಂತೆ ನದಿಗಳು ಗಂಡು ದೇವತೆಗಳಾಗಿ ರೂಪಾಂತರಗೊಂಡರು. ಈ ಅಂಶ ಬಲಿಗಳ ಆಚರಣೆಯ ವಿಶ್ಲೇಷಣೆಗಳಿಗೆ ಸಾಕಷ್ಟು ನೆರವು ನೀಡಬಲ್ಲದು. ನದಿಗೆ ಹೆಣ್ಣನ್ನು ಬಲಿ ಕೊಡುತ್ತಿದ್ದ ಉದಾಹರಣೆ ಒಂದನ್ನು ಚೈನಾದೇಶದ ಪಟ್ಟಣವೊಂದರಲ್ಲಿ ಪ್ರತಿವರ್ಷ ನದಿ ಪೂಜೆ ನಡೆಯುತ್ತಿದ್ದ ನದಿಗೆ ಆ ಪಟ್ಟಣದಲ್ಲೇ ಅತ್ಯಂತ ಸುಂದರಿ ಎಂದು ಗುರುತಿಸಲ್ಪಡುವ ಹೆಣ್ಣನ್ನು ಬಲಿಯಾಗಿ ಅರ್ಪಿಸುತ್ತಿದ್ದರಂತೆ. ಆ ಆಚರಣೆಯನ್ನು ಅವರು ನದಿಯ ಮದುವೆ ಎಂದು ಕರೆಯುತ್ತಿದ್ದರಂತೆ.''

ಸಂಸ್ಕೃತಿಗಳ ಆರಂಭ ಕಾಲದಲ್ಲಿ ಭೂಮಿ, ನದಿ, ಒಟ್ಟಾರೆ ಪ್ರಕೃತಿಯ ಪೂಜಾರಿಯಾಗಿದ್ದ ಗಂಡಸು ಪುರುಷ ಯಜಮಾನ್ಯ ಪ್ರಬಲಗೊಂಡಂತೆ, ಪ್ರಕೃತಿಗೆ ಒಡೆಯನಾಗಿ ಪರಿವರ್ತನೆಗೊಂಡನು. ನಾಗರೀಕತೆಗಳು ಬೆಳೆದಂತೆ

ಕಾಲಾಂತರದಲ್ಲಿ ಪ್ರಕೃತಿಯ ಬಲಿಪಶುವಾಗುತ್ತಿದ್ದ ಧಾರ್ಮಿಕ ವ್ಯವಸ್ಥೆಯ ಪೂಜಾರಿ, ರಾಜಕೀಯ ವ್ಯವಸ್ಥೆಯ ರಾಜ, ಈ ಇಬ್ಬರೂ ಬೇರೆ ಬೇರೆಯಾಗಿ ರೂಪಗೊಂಡರು. ಧಾರ್ಮಿಕ ವ್ಯವಸ್ಥೆ ಹಾಗೂ ರಾಜಕೀಯ ವ್ಯವಸ್ಥೆಗಳು ಒಡೆದು, ಭಿನ್ನವೂ ಸ್ವತಂತ್ರವೂ ಆಗಿ ಬೆಳೆದವು. ರಾಜನ ಕೈಯಿಂದ ಧಾರ್ಮಿಕ ಸೂತ್ರಗಳು ತಪ್ಪಿ ಹೋದರೂ ಧಾರ್ಮಿಕ ವ್ಯವಸ್ಥೆಯ ಸಹಭಾಗಿತ್ವದಲ್ಲಿ ನರಬಲಿ ಪೂಜಾರಿಯ ನೇತೃತ್ವದಲ್ಲಿ ಅಸ್ತಿತ್ವವನ್ನು ಮುಂದುವರಿಸಿತು. ಇತ್ತ ಅರಸ ಧಾರ್ಮಿಕತೆಯಿಂದ ಹೊರ ಬರುವ ಮೂಲಕ ತಾನು ಬಲಿ ಪಶುವಾಗುವುದನ್ನು ತಪ್ಪಿಸಿಕೊಂಡ. ಹೀಗೆ ನರಬಲಿಯಲ್ಲಿ ಆಹುತಿಯಾಗುತ್ತಿದ್ದ ಪೂಜಾರಿ - ಯಾಜಮಾನನಾಗಿ ಪರಿವರ್ತನೆ ಪಡೆದಿದ್ದು, ಧರ್ಮ, ರಾಜ್ಯವ್ಯವಸ್ಥೆಗಳು ಬೇರ್ಪಟ್ಟು ರಾಜ ಬಲಿಪಶುವಾಗುವ ಸಂದರ್ಭದಿಂದ ತಪ್ಪಿಸಿಕೊಂಡ. ಕೆಲವು ಕಾಲದ ನಂತರ ಪೂಜಾರಿ ಕೂಡ ಬದಲಿಗಳ ಮೂಲಕ ಬಲಿಪಶುವಾಗುವುದರಿಂದ ತಪ್ಪಿಸಿಕೊಂಡ. ಹೀಗೆ ಸಂಸ್ಕೃತಿಗಳ ಧಾರ್ಮಿಕ ವ್ಯವಸ್ಥೆ ಹಾಗೂ ರಾಜಕೀಯ ವ್ಯವಸ್ಥೆಗೆ ಪುರುಷರು ಮುಖಂಡರಾಗಿ ಪ್ರಬಲರಾದಂತೆ ಒಟ್ಟಾರೆ ಸಮಾಜದ ಚಿಂತನ ಕ್ರಮಗಳು ಪುರುಷ ಯಾಜಮಾನ್ಯದ ಪರವಾಗಿ ರೂಪ ಪಡೆಯುತ್ತಾ ಬೆಳೆದವು.

ಭಾರತದಲ್ಲೂ ಕೂಡ ಪ್ರಾಚೀನ ಕಾಲದಲ್ಲಿ ಪ್ರಕೃತಿಗೆ ನರಬಲಿ ನೀಡುವ ಪದ್ಧತಿ ಇತ್ತು, ''ಋಗ್ವೇದದಲ್ಲಿ ಊರ್ವಶಿ ಒಬ್ಬ ಸ್ತ್ರೀ ದೇವತೆಯಾಗಿದ್ದು, ಅವಳ ಗಂಡ ಪುರೂರವನನ್ನು ಅವಳಿಗೆ ಬಲಿ ಕೊಡುವ ಸನ್ನಿವೇಶವನ್ನು ಚಿತ್ರಿಸಲಾಗಿದೆ. ಈ ಕತೆ ವೇದ ಪೂರ್ವ ಕಾಲದಲ್ಲಿನ ಮಾತೃದೇವತಾರಾಧನೆಯಲ್ಲಿ ಬಳಕೆಯಲ್ಲಿದ್ದ ಪುರುಷ ಬಲಿ ವಿಧಿಯನ್ನು ಸೂಚಿಸುತ್ತದೆ.'' ಬಲಿ ಪಶು ಗಂಡೇ ಆಗಿದ್ದ ಈ ಆಚರಣೆಯು ಅಸ್ತಿತ್ವದಲ್ಲಿದ್ದ ಚಾರಿತ್ರಿಕ ಸತ್ಯದ ಪಳೆಯುಳಿಕೆಯಾಗಿ ಇಂದಿಗೂ ಉಳಿದು ಹೋಗಿರುವ ಗಂಡಿನ ಬಲಿಯ ಆಚರಣೆಯೊಂದು ಕರ್ನಾಟಕದಲ್ಲಿ ರೂಢಿಯಲ್ಲಿರುವುದು ಕಂಡುಬಂದಿದೆ. ಪುರುಷ ಯಾಜಮಾನ್ಯ ಬಲಿ ಪಶುಗಳನ್ನು ಹೆಣ್ಣಿಗೆ, ಪ್ರಾಣಿಗಳಿಗೆ, ಸಂಕೇತಗಳಿಗೆ ಬದಲಿಸಿದರು ಎನ್ನುವುದು ಅಧ್ಯಯನದಿಂದ ತಿಳಿದು ಬರುವ ಸತ್ಯವೇ ಆಗಿದೆ. ಆದರೆ ಈ ಬಲಿಗಳ ನಡುವೆಯೂ ತೊಗಡವೀರರು ಎಂದು ಕರೆಯಲ್ಪಡುವ ದೇವಾಂತ ಜನಾಂಗದ ಒಂದು ಉಪಭಾಗ, ಇವರಲ್ಲಿ ನರಬಲಿ ಆಚರಣೆಯ ಗುರುತು ಉಳಿದು ಹೋಗಿದೆ.'' ಇವರು ಮೂಲತಃ ನೇಕಾರರು. ಈ ಜನಾಂಗದವರಲ್ಲಿ ಬಲಿಹಾರ ಎಂಬ ಚೌಡೇಶ್ವರಿ ದೇವಿಯ ಆಚರಣೆಯು ರೂಢಿಯಲ್ಲಿದೆ. ಈ ಆಚರಣೆಯಲ್ಲಿ ಮಾತೃದೇವತೆ (ಸ್ತ್ರೀ ಶಕ್ತಿ)ಗೆ ಬಲಿಕೊಡುವ ಆಚರಣೆಯನ್ನು ಅದರ ಮೂಲ ರೂಪದಲ್ಲಿಯೇ ಸಾಂಕೇತಿಕವಾಗಿ ಉಳಿಸಿಕೊಂಡಿದ್ದಾರೆ. ಈ ತೊಗಟವೀರರು ಪ್ರತಿವರ್ಷವೂ ಮಹಾನವಮಿಯ ಸಂದರ್ಭದಲ್ಲಿ ತಮ್ಮ ಕುಲದೇವತೆಯಾದ ಚೌಡಮ್ಮ (ಚೌಡೇಶ್ವರಿ/ಬಂದಮ್ಮ) ದೇವಿಗೆ ಬಲಿಹಾರ ಅರ್ಪಣೆಯನ್ನು ನಡೆಸುತ್ತಾರೆ. ಆಚರಣೆಯ ಮುಖ್ಯ ಕ್ರಿಯೆ ನರಬಲಿಯೇ ಆಗಿದೆ. ಅಂದರೆ ನರಬಲಿಯನ್ನು ಇಲ್ಲಿ ನೇರ ಅನುಕರಣೆ ಮಾಡಲಾಗುತ್ತದೆ. ತೊಗಟರಲ್ಲಿ ನರಬಲಿ ಆದರಲ್ಲೂ ಗಂಡು ಬಲಿಯೇ ಏಕೆ? ಎಂದು ಪ್ರಶ್ನಿಸಿದರೆ ಅವರಲ್ಲಿ ಪ್ರಚಾರದಲ್ಲಿರುವ ಐತಿಹ್ಯವೊಂದನ್ನು ಉದಾಹರಿಸುತ್ತಾರೆ. ಒಮ್ಮೆ ಕೋಲಾರದಲ್ಲಿರುವ ಕೋಲಾರಮ್ಮ ದೇವಸ್ಥಾನದಲ್ಲಿ ತೊಗಟರಿಗೆ ಮತ್ತು ಇತರರಿಗೆ ಚೌಡೇಶ್ವರಿಯ ಮೇಲಿನ ಹಕ್ಕಿನ ವಿಚಾರದಲ್ಲಿ ವಾಗ್ವಾದ ನಡೆಯಿತಂತೆ. ಆಗ ಅಮ್ಮನವರು ಬೇವಿನ ಮರವನ್ನು ಏರಿ ಕುಳಿತುಬಿಟ್ಟಳಂತೆ. ವಾರಸುದಾರರು ಕರೆದರೆ ಮಾತ್ರ ತಾಯಿ ಕೆಳಗೆ ಬರುತ್ತಾಳೆ ಅಂತ ಶಾಸ್ತ್ರವಾಯಿತಂತೆ. ಆಗ ಇನ್ನೊಂದು ಗುಂಪಿನವರು ಪೂಜೆಗಳನ್ನು ನೆರವೇರಿಸಿ ಬಲಿ ನೀಡಿ ಕರೆದರಂತೆ, ತಾಯಿ ಬರಲಿಲ್ಲ. ಆಗ ತೊಗಟರ ಗುಂಪಿಗೆ ಸೇರಿದವರು ಪೂಜಿಸಿ ಬಲಿ ನೀಡಿದರೂ ತಾಯಿ ಬರಲಿಲ್ಲವಂತೆ. ಆಗ ಒಬ್ಬ ತೊಗಟ ಭಕ್ತ ತನ್ನ ಮಗನ ಜೊತೆಗೆ ಅಲ್ಲಿಗೆ ಬಂದಿದ್ದನಂತೆ. ತಾಯಿಗೆ ಅವನು ತನ್ನ ಒಬ್ಬನೇ ಗಂಡು ಮಗುವನ್ನು ಬಲಿಕೊಡೆದನಂತೆ. ನಂತರ ದೇವಿ ಮರ ಇಳಿದು ಬಂದು ಪೀಠದಲ್ಲಿ ಪ್ರತಿಷ್ಠಾಪನೆಗೊಂಡಳಂತೆ. ನಂತರ ತಾಯಿ ಬಂಢಾರ ತೆಗೆದು ಈ ಹುಡುಗನ ರುಂಡ ಮುಂಡಗಳ ಮೇಲೆ ಹಾಕಿದಳಂತೆ. ಅವನ ತುಂಡಾದ ಶರೀರವು ಒಂದು ಗೂಡಿ ಜೀವ ಮರಳಿ ಬಂತಂತೆ. ಈ ಪುರಾಣ ಕಥೆಯ ಪ್ರಕಾರ ಮಗನನ್ನೇ ಮಾತೃದೇವತೆಗೆ ಬಲಿ ನೀಡಿರುವ ಸುಳಿವನ್ನು ನೀಡುವುದಲ್ಲದೆ ಈಗ ನಡೆಯುತ್ತಿರುವ ಬಲಿಹಾರ ಉಗ್ರ ಆಚರಣೆಯ, ನರಬಲಿಯ, ನಟನೆಯೆಂದೇ ಒಪ್ಪಿಕೊಳ್ಳುತ್ತದೆ. ಈ ಉಗ್ರ ಆಚರಣೆಯಲ್ಲಿ ಮುಖ್ಯವಾಗಿ ಮೂರು ಭಾಗಗಳಿವೆ.

*1. ಬಲಿ ಪಶುವಾದ (ಗಂಡು) ಕುರಿಯನ್ನು ತೊಗಟರ ಯುವಕನೊಬ್ಬನು ಭುಜದ (ಪೂಜಾರಿ) ಮೇಲೆ ಹಾಕಿಕೊಂಡು ಅದರ ಕತ್ತು ಕಡಿಯಬೇಕು. ಕಡಿಯುವಾಗ ಕುರಿ ನೆಲದ ಮೇಲೆ ನಿಲ್ಲಬಾರದು ಎನ್ನುವುದು ನಿಯಮ.*

*2. ತೊಗಟವೀರಕುಮಾರರು (ಮನೆಗೆ ಒಬ್ಬರಂತೆ) ತಮ್ಮ ಎರಡೂ ಕೈಗಳಲ್ಲಿ ಬಾಕು ಎಂಬ ಆಯುಧವನ್ನು ತೆಗೆದುಕೊಂಡು ಎದೆಗೆ ತಿವಿದುಕೊಳ್ಳುತ್ತಾರೆ. ಬಾಕುವಿನ ಎರಡೂ ಅಲಗು ಹರಿತವಾಗಿದ್ದು ಎದೆ ಸೀಳಿಕೊಂಡು ರಕ್ತಾರ್ಪಣೆ ಮಾಡುತ್ತಾರೆ. ಹಾಗೆ ಅವರು ಇರಿದು ಕೊಳ್ಳುವಾಗ ಅವರು ಕೋಬಲಿಗ ಎಂಬುದಾಗಿ ಕೂಗುತ್ತಾರೆ. ಕೋಬಲಿಗಾ ಎನ್ನುವ ಶಾಬ್ದಿಕ ರೂಪವೂ ಇಕೋ ಬಲಿ ಎಂಬ ಮೂಲ ರೂಪದ ಉಚ್ಚಾರಣಾ ರೂಪವೇ ಆಗಿದೆ. ಇವರು ಸಾಮೂಹಿಕವಾಗಿ ಈ ರಕ್ತತರ್ಪಣೆಯನ್ನು ನೀಡುತ್ತಾರೆ. ತಮ್ಮನ್ನು ತಾವು ಇರಿದುಕೊಳ್ಳುವುದಲ್ಲದೆ ತಮ್ಮನ್ನು ಬಲಿಯಾಗಿ ಸ್ವೀಕರಿಸುವಂತೆ ದೇವಿಯನ್ನು ಅವರು ಒತ್ತಾಯಿಸುತ್ತಾರೆ.*

3. ಕುರಿಯನ್ನು ಭುಜದ ಮೇಲೆ ಕಡಿಯುವಾಗಲೇ ಪಂಚದ್ರವ್ಯಗಳಿಂದ ಮಾಡಿದ ತಳಿಗೆಗೆ (ಅನ್ನ) ಕುರಿಯ ರಕ್ತ ಸುರಿಯುವಂತೆ ಹಿಡಿದು ಅದನ್ನು ಆನ್ನಕ್ಕೆ ಬೆರೆಸಿ (ಹಸಿಯದೇ) ಪ್ರಸಾದವೆಂದು ಸ್ವೀಕರಿಸುತ್ತಾರೆ.

ಬಂಡಮ್ಮನಿಗೆ ಬಲಿ ಕೊಡುವಾಗ ಭುಜದ ಮೇಲೆ ಕುರಿಯನ್ನು ಹೊತ್ತುಕೊಂಡು ಬಲಿಕೊಡಬೇಕು ಎನ್ನುವ ನಂಬಿಕೆ ಮತ್ತು ಬಲಿ ಹೊತ್ತವನು ತನ್ನ ಕತ್ತಿನ ಸಮೀಪವೇ ಕುರಿಯ ಕತ್ತನ್ನು ಕಡಿಯುವ ಕೊಯ್ಯುವ ಕ್ರಿಯೆ ನರಬಲಿಯ ನೇರ ಅನುಕರಣೆಯೇ ಆಗಿದೆ. ಕುರಿ ಹೊತ್ತವನ ಬದಲಿಗೆ ಅವ ಭುಜದ ಮೇಲಿನ ಕುರಿಯನ್ನು ಕಡಿಯುವುದರಿಂದ ನರಬಲಿಯ ನೀಡಿದಂತೇ ಆಗುತ್ತದೆ. ಆದ್ದರಿಂದಲೇ ಆಚರಣೆಯಲ್ಲಿ ಕುರಿಯನ್ನು ನೆಲದ ಮೇಲೆ ಕಡಿಯಬಾರದು ಎನ್ನುವ ನಿಯಮವನ್ನು ರೂಪಿಸಿಕೊಂಡಿದ್ದಾರೆ. ಬಲಿ ಹೊಡೆದ ನಂತರ ವೀರಗಾರರು ಚಾಕುಗಳಿಂದ ಎದೆ ಸೀಳಿಕೊಳ್ಳುವ ಮೂಲಕ ದೇವಿಗೆ ರಕ್ತಾರ್ಪಣ ಸಲ್ಲಿಸುತ್ತಾರೆ. ಅನಂತರ ಅವರು ಹತ್ತಿರದ ನೀರಿನ ಮೂಲಕ್ಕೆ ಹೋಗಿ ಮುಳುಗಿ ಬರುತ್ತಾರೆ. ಬಲಿ ಪಶುವಿನ ರಕ್ತ ಬೆರಸಿದ ತಳಿಗೆಯನ್ನು ಎಲ್ಲರಿಗೂ ನೀಡುತ್ತಾರೆ. ಕೆಲವು ಕಡೆ ಅನ್ಯ ಮತಸ್ಥರಿಗೆ ಈ ಪ್ರಸಾದ ಕೊಡುವುದನ್ನು ನಿಷೇಧಿಸಿದ್ದಾರೆ. ಕೊಡಗಿನಲ್ಲಿ ಮಾರಿ ಹಬ್ಬಕ್ಕೆ ಕೋಣವನ್ನು ಕಡಿಯುವ ಪೂಜಾರಿ ಇದು ಕೋಣವಲ್ಲ ಮನುಷ್ಯ ಎಂದು ದೇವರಿಗೆ ಭಿನ್ನವಿಸುವ ಪದ್ಧತಿ ಇಂದಿಗೂ ರೂಢಿಯಲ್ಲಿ ಇದೆಯಂತೆ.

ಇಂದು ನಡೆಯುತ್ತಿರುವ ಉಗ್ರಬಲಿ ಆಚರಣೆಗಳಲ್ಲಿ ಬದಲಿಗಳ ಪ್ರವೇಶದಿಂದ ನರಬಲಿಯ ಸಂಬಂಧವನ್ನು ಗುರುತಿಸುವುದು ಅತ್ಯಂತ ಕಷ್ಟಕರವಾದದ್ದಾಗಿದೆ. ಆದರೆ ತೊಗಟವೀರರ ಈ ಬಲಿಹಾರ ಆಚರಣೆ ಮಾತ್ರ ಸ್ಪಷ್ಟವಾಗಿಯೇ ಆದಿಮ ಶಕ್ತಿಯಾದ ಮಾತೃದೇವತೆಗೆ ನರಬಲಿಯ / ಗಂಡು ಬಲಿ ಕೊಡುವ ಪದ್ಧತಿಯನ್ನು ಉಗ್ರನಾಟಕೀಯತೆ ಮತ್ತು ಆಚರಣೆಗಳ ಮೂಲಕ ಅಭಿನಯಿಸಿ ಆಚರಿಸುವುದು, ಮಾನವ ಶಾಸ್ತ್ರೀಯ ಹಾಗೂ ಸಂಸ್ಕೃತಿಯ ಅಧ್ಯಯನಗಳಿಗೆ ಮುಖ್ಯ ಆಕರವಾಗಿ ಒದಗಿದೆ. ಆರ್‍ಯೀಕರಣ ಶಿಷ್ಟ ಸಂಸ್ಕೃತಿಗಳ ಪುರುಷ ಪ್ರಭಾವಗಳ ನಡುವೆಯೂ ಗಂಡಸನ್ನು ಬಲಿ ಕೊಡುವ ಪದ್ಧತಿಯನ್ನು ಇಂದಿಗೂ ಸಂಕೇತವಾಗಿ ಉಳಿದುಕೊಂಡು ಬಂದಿರುವುದು, ಸ್ತ್ರೀಶಕ್ತಿ ಸಾಧ್ಯವಿದ್ದ ಕಡೆ ತನ್ನ ಯಾಜಮಾನ್ಯದ ಪಟ್ಟು ಸಡಿಲಿಸದೇ, ಸಂಪೂರ್ಣವಾಗಿ ವೈದಿಕ ಪರಂಪರಗೆ ಶರಣಾಗದ ನೆಲೆಗಳನ್ನು ದಾಖಲಿಸುತ್ತದೆ. ಗ್ರಾಮದೇವತೆಗಳ ಆಚರಣೆಗಳನ್ನು ಈ ಹಿನ್ನೆಲೆಯಲ್ಲಿ ಅಧ್ಯಯನ ಮಾಡುವ ಅವಶ್ಯಕತೆ ಇದೆ.

– ಕೆ. ವೈ ನಾರಾಯಣಸ್ವಾಮಿ
'ನೀರ ದೀವಿಗೆ'ಯಿಂದ

RNI No. 45577/88

"Achala" 108, Skyline Surabhi,
14-9, Vidyapeeta Road, BSK III Stage,
Bangalore - 560 085

To :

Smt/Sri

CPMG/KA/BG-8/2001
Book-Post/News Letter